RNI No. **KARBIL/2001/47147**

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೮<br>**Volume 148** | ಬೆಂಗಳೂರು, ಗುರುವಾರ, ಡಿಸೆಂಬರ್ ೫, ೨೦೧೩ (ಮಾರ್ಗಶಿರ ೧೪, ಶಕ ವರ್ಷ ೧೯೩೫)<br>**Bangalore, Thursday, December 5, 2013 ( Margashira 14, Shaka Varsha 1935)** | ಸಂಚಿಕೆ ೪೮<br>**Issue 48** |
|---|---|---|

## ಭಾಗ ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು

**ನಗರ ಸಿವಿಲ್ ನ್ಯಾಯಾಲಯ**

**ನಗರ ಸಿವಿಲ್ ನ್ಯಾಯಾಲಯದ ಕಾರ್ಯಾಲಯ, ಬೆಂಗಳೂರು**

**ಸಂಖ್ಯೆ:– ಎ.ಡಿ.ಎಂ.I (ಎ)/ನೇಮಕಾತಿ/ 2013, ದಿನಾಂಕ : 22-11–2013**

**ನೇಮಕಾತಿ ಪ್ರಕಟಣೆ**

ಬೆಂಗಳೂರು ನಗರ ಸಿವಿಲ್ ನ್ಯಾಯಾಲಯ ಘಟಕದಲ್ಲಿ ಖಾಲಿ ಇರುವ ಈ ಕೆಳಕಂಡ ಹುದ್ದೆಗಳಿಗೆ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ಕೆಳಕಂಡ ಷರತ್ತುಗಳನ್ನು ಪೂರೈಸಿದ ಅರ್ಹ ಅಭ್ಯರ್ಥಿಗಳು ದಿನಾಂಕ: **31–12–2013 ಸಂಜೆ 4.00** ಗಂಟೆಯೊಳಗೆ ಅರ್ಜಿಗಳನ್ನು ಸಲ್ಲಿಸಲು ಸೂಚಿಸಿದೆ.

**: ಖಾಲಿ ಹುದ್ದೆಯ ವಿವರಗಳು :**

| ಕ್ರಮ ಸಂಖ್ಯೆ | ಅಧಿಸೂಚನೆ ಸಂಖ್ಯೆ | ಹುದ್ದೆಯ ಹೆಸರು | ಖಾಲಿ ಹುದ್ದೆಗಳ ಸಂಖ್ಯೆ | ವೇತನ ಶ್ರೇಣಿ |
|---|---|---|---|---|
| **1** | **2** | **3** | **4** | **5** |
| 1 | ಎಡಿಎಂ – I (ಎ) 1100/2013 | ಶೀಘ್ರಲಿಪಿಗಾರರು | 30 + 8 (ಬ್ಯಾಕ್‌ಲಾಗ್) | 14550–350–15600–400–17200–450–19000–500–21000–600–24600–700–26700 + ವಿಶೇಷ ಭತ್ಯೆ ರೂ.165/– |
| 2 | ಎಡಿಎಂ – I(ಎ) 1101/2013 | ಬೆರಳಚ್ಚುಗಾರರು | 33 | 11600–200–12000–250–13000–300–14200–350–15600–400–17200–450–19000–500–21000 + ವಿಶೇಷ ಭತ್ಯೆ ರೂ. 135/– |
| 3 | ಎಡಿಎಂ – I(ಎ) 1102/2013 | ಬೆರಳಚ್ಚು–ನಕಲುಗಾರರು | 13 | 11600–200–12000–250–13000–300–14200–350–15600–400–17200–450–19000–500–21000 + ವಿಶೇಷ ಭತ್ಯೆ ರೂ. 100/– |

**ಖಾಲಿ ಹುದ್ದೆಗಳ ವರ್ಗೀಕರಣ**

ಸರ್ಕಾರಿ ಆದೇಶ ಸಂಖ್ಯೆ ಡಿಪಿಎಆರ್ 8 ಸಹಿಮ 95 ದಿನಾಂಕಃ 20–6–95 ಮತ್ತು ಸರ್ಕಾರಿ ಆದೇಶ ಸಂಖ್ಯೆ ಸಿಆಸುಇ 97 ಸೇನೆನಿ 2002 ದಿನಾಂಕ 22–11–2002 ಹಾಗೂ ಸರ್ಕಾರಿ ಆದೇಶ ಸಂಖ್ಯೆ 3 ಸಿಆಸುಇ 53 ಸೇನೆನಿ ದಿನಾಂಕಃ 4.1.2008ರ ಪ್ರಕಾರ ಕಾದಿರಿಸಿದ ಹುದ್ದೆಗಳ ವರ್ಗೀಕರಣ:

**ಶೀಘ್ರಲಿಪಿಗಾರರ ಹುದ್ದೆಗಳು : (ಒಟ್ಟು 30 + 8 (ಬ್ಯಾಕ್‌ಲಾಗ್) ಹುದ್ದೆ)**

| | ಸಾಮಾನ್ಯ ಅರ್ಹತೆ | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ | ಪ್ರವರ್ಗ – I | ಪ್ರವರ್ಗ–II(ಎ) | ಪ್ರವರ್ಗ– II (ಬಿ) | ಪ್ರವರ್ಗ– III (ಎ) | ಪ್ರವರ್ಗ– III (ಬಿ) | ಒಟ್ಟು |
|---|---|---|---|---|---|---|---|---|---|
| **1. ಮಹಿಳಾ ಅಭ್ಯರ್ಥಿ** | 5 | 2 + **3***| – | 1 | 1 | – | – | – | 9 + **3*** |
| **2. ಮಾಜಿ ಸೈನಿಕರು** | 1 | **1*** | – | – | – | – | – | – | 1 + **1*** |
| **3. ಗ್ರಾಮೀಣ ಅಭ್ಯರ್ಥಿ** | 4 | 1+ **2*** | **2*** | – | 2 | 1 | 1 | – | 9 + **4*** |

| | ಸಾಮಾನ್ಯ ಅರ್ಹತೆ | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ | ಪ್ರವರ್ಗ – I | ಪ್ರವರ್ಗ–II(ಎ) | ಪ್ರವರ್ಗ– II (ಬಿ) | ಪ್ರವರ್ಗ– III (ಎ) | ಪ್ರವರ್ಗ– III (ಬಿ) | ಒಟ್ಟು |
|---|---|---|---|---|---|---|---|---|---|
| 4. ಇತರೇ ಅಭ್ಯರ್ಥಿ | 1 | – | 1 | – | – | 1 | – | 1 | 4 |
| 5. ಕನ್ನಡ ಮಾಧ್ಯಮ ಅಭ್ಯರ್ಥಿ | 1 | 1 | – | – | 1 | – | – | – | 3 |
| 6. ಯೋಜನಾ ನಿರಾಶ್ರಿತ ಅಭ್ಯರ್ಥಿ | 1 | 1 | – | – | 1 | – | – | – | 3 |
| 7. ಅಂಗವಿಕಲ ಅಭ್ಯರ್ಥಿ | 1** | – | – | – | – | – | – | – | 1 |
| ಒಟ್ಟು | **14** | **5 + 6*** | **1+ 2*** | **1** | **5** | **2** | **1** | **1** | **30 + 8*** |

* ಬ್ಯಾಕ್ ಲಾಗ್ ಹುದ್ದೆಗಳು

** ಕುಷ್ಠರೋಗದಿಂದ ವಿಮುಕ್ತರಾದ ಹಾಗೂ ಚಲನವಲನ ವೈಕಲ್ಯವುಳ್ಳ ಅಭ್ಯರ್ಥಿಗಳಿಗೆ ಮೀಸಲಿರಿಸಲಾಗಿದೆ.

**ಬೆರಳಚ್ಚುಗಾರರ ಹುದ್ದೆಗಳು (ಒಟ್ಟು 33 ಹುದ್ದೆಗಳು)**

| | ಸಾಮಾನ್ಯ ಅರ್ಹತೆ | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ | ಪ್ರವರ್ಗ – I | ಪ್ರವರ್ಗ–II(ಎ) | ಪ್ರವರ್ಗ– II (ಬಿ) | ಪ್ರವರ್ಗ– III (ಎ) | ಪ್ರವರ್ಗ– III (ಬಿ) | ಒಟ್ಟು |
|---|---|---|---|---|---|---|---|---|---|
| 1. ಮಹಿಳಾ ಅಭ್ಯರ್ಥಿ | 4 | 2 | – | – | 2 | 1 | – | 1 | 10 |
| 2. ಮಾಜಿ ಸೈನಿಕರು | 1 | – | – | – | – | – | – | – | 1 |
| 3. ಗ್ರಾಮೀಣ ಅಭ್ಯರ್ಥಿ | 4 | 2 | 1 | 1 | 2 | 1 | 1 | – | 12 |
| 4. ಇತರೇ ಅಭ್ಯರ್ಥಿ | 1 | 1 | – | 1 | 1 | 1 | 1 | – | 6 |
| 5. ಕನ್ನಡ ಮಾಧ್ಯಮ ಅಭ್ಯರ್ಥಿ | 1 | – | – | – | – | – | – | – | 1 |
| 6. ಯೋಜನಾ ನಿರಾಶ್ರಿತ ಅಭ್ಯರ್ಥಿ | 1 | – | – | – | – | – | – | – | 1 |
| 7. ಅಂಗವಿಕಲ ಅಭ್ಯರ್ಥಿ | | – | – | – | 1** | – | – | 1** | 2 |
| ಒಟ್ಟು | **12** | **5** | **1** | **2** | **6** | **3** | **2** | **2** | **33** |

** ಕುಷ್ಠರೋಗದಿಂದ ವಿಮುಕ್ತರಾದ ಅಭ್ಯರ್ಥಿಗಳಿಗೆ ಮೀಸಲಿರಿಸಲಾಗಿದೆ.

**ಬೆರಳಚ್ಚು–ನಕಲುಗಾರರ ಹುದ್ದೆಗಳು (ಒಟ್ಟು 13 ಹುದ್ದೆಗಳು)**

| | ಸಾಮಾನ್ಯ ಅರ್ಹತೆ | ಪರಿಶಿಷ್ಟ ಜಾತಿ | ಪ್ರವರ್ಗ – I | ಪ್ರವರ್ಗ–II(ಎ) | ಪ್ರವರ್ಗ– III (ಎ) | ಪ್ರವರ್ಗ– III (ಬಿ) | ಒಟ್ಟು |
|---|---|---|---|---|---|---|---|
| 1. ಮಹಿಳಾ ಅಭ್ಯರ್ಥಿ | 2 | – | – | 1 | – | – | 3 |
| 2. ಮಾಜಿ ಸೈನಿಕರು | 1 | – | – | 1 | – | – | 2 |
| 3. ಗ್ರಾಮೀಣ ಅಭ್ಯರ್ಥಿ | – | 1 | – | – | 1 | – | 2 |
| 4. ಇತರೇ ಅಭ್ಯರ್ಥಿ | 1 | – | 1 | 1 | – | 1 | 4 |
| 5. ಕನ್ನಡ ಮಾಧ್ಯಮ ಅಭ್ಯರ್ಥಿ | – | 1 | – | – | – | – | 1 |
| 6. ಯೋಜನಾ ನಿರಾಶ್ರಿತ ಅಭ್ಯರ್ಥಿ | 1 | – | – | – | – | – | 1 |
| ಒಟ್ಟು | **5** | **2** | **1** | **3** | **1** | **1** | **13** |

| | | |
|---|---|---|
| 1 | ನೇಮಕಾತಿ ವಿಧಾನ | ಕರ್ನಾಟಕ ಅಧೀನ ನ್ಯಾಯಾಲಯಗಳು (ಲಿಪಿಕ ಮತ್ತು ಇತರ ಹುದ್ದೆಗಳು) (ನೇಮಕಾತಿ) ನಿಯಮಗಳು 1982, ನಿಯಮ 4ರ ಪ್ರಕಾರ ಸರ್ಕಾರದ ಅಧಿಸೂಚನೆ ಸಂಖ್ಯೆ: ಲಾ 01 ಎಲ್ಎಸಿ 2005 ದಿನಾಂಕ: 13.2.2008 ರಲ್ಲಿ ತಿದ್ದುಪಡಿಯಾದಂತೆ. |
| 2 | ಭರ್ತಿ ಮಾಡಿದ ಅರ್ಜಿಗಳನ್ನು ಕಳುಹಿಸಬೇಕಾದ ವಿಳಾಸ | ವಿಲೇಖನಾಧಿಕಾರಿಗಳು, ನಗರ ಸಿವಿಲ್ ನ್ಯಾಯಾಲಯ, ಬೆಂಗಳೂರು– 560 009 |
| 3 | ಅಭ್ಯರ್ಥಿಗಳು ಅರ್ಜಿಗಳನ್ನು ಖುದ್ದಾಗಿ ಅಥವಾ ಅಂಚೆ ಮೂಲಕ ಸಲ್ಲಿಸಲು ಕೊನೆಯ ದಿನಾಂಕ | ದಿನಾಂಕ: 31.12.2013 ರಂದು ಸಂಜೆ 4.00 ಗಂಟೆ |

| | | |
|---|---|---|
| 4 | **ವಿದ್ಯಾರ್ಹತೆಃ** | |
| | **ಅ) ಶೀಘ್ರಲಿಪಿಗಾರರ ಹುದ್ದೆಗೆ** | ಅಭ್ಯರ್ಥಿಯು ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯಲ್ಲಿ ತೇರ್ಗಡೆಯಾಗಿರಬೇಕು ಹಾಗೂ ಸಾರ್ವಜನಿಕ ಶಿಕ್ಷಣ ಇಲಾಖೆ ನಡೆಸುವ ಆಂಗ್ಲ ಹಾಗೂ ಕನ್ನಡ ಭಾಷೆಗಳ ಹಿರಿಯ ಶ್ರೇಣಿಯ ಶೀಘ್ರಲಿಪಿ ಮತ್ತು ಆಂಗ್ಲ ಹಾಗೂ ಕನ್ನಡ ಭಾಷೆಗಳ ಹಿರಿಯ ಶ್ರೇಣಿಯ ಬೆರಳಚ್ಚು ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿರಬೇಕು ಅಥವಾ ತತ್ಸಮಾನ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿರಬೇಕು. |
| | **ಆ) ಬೆರಳಚ್ಚುಗಾರರ ಹುದ್ದೆಗೆ** | ಅಭ್ಯರ್ಥಿಯು ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯಲ್ಲಿ ತೇರ್ಗಡೆಯಾಗಿರಬೇಕು ಹಾಗೂ ಸಾರ್ವಜನಿಕ ಶಿಕ್ಷಣ ಇಲಾಖೆ ನಡೆಸುವ ಆಂಗ್ಲ ಹಾಗೂ ಕನ್ನಡ ಭಾಷೆಗಳ ಹಿರಿಯ ಶ್ರೇಣಿಯ ಬೆರಳಚ್ಚು ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿರಬೇಕು ಅಥವಾ ತತ್ಸಮಾನ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿರಬೇಕು. |
| | **ಇ) ಬೆರಳಚ್ಚು-ನಕಲುಗಾರರ ಹುದ್ದೆಗೆ** | ಅಭ್ಯರ್ಥಿಯು ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯಲ್ಲಿ ತೇರ್ಗಡೆಯಾಗಿರಬೇಕು ಹಾಗೂ ಸಾರ್ವಜನಿಕ ಶಿಕ್ಷಣ ಇಲಾಖೆ ನಡೆಸುವ ಆಂಗ್ಲ ಭಾಷೆಯ ಕಿರಿಯ ಶ್ರೇಣಿಯ ಬೆರಳಚ್ಚು ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿರಬೇಕು ಅಥವಾ ತತ್ಸಮಾನ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿರಬೇಕು. |
| **5** | **ವಯೋಮಿತಿ** | ಅಭ್ಯರ್ಥಿಯು ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದಂದು 18 ವರ್ಷ ಪೂರೈಸಿರಬೇಕು ಮತ್ತು ಕೆ.ಸಿ .ಎಸ್.(ಸಾಮಾನ್ಯ ನೇಮಕಾತಿ) ನಿಯಮಗಳು, 1977 ನಿಯಮ 6ರಲ್ಲಿ ನಿಗದಿಪಡಿಸಿರುವಂತೆ ಗರಿಷ್ಠ ವಯಸ್ಸು ಕೆಳಕಂಡಂತಿದೆ.<br>1 ಅನುಸೂಚಿತ ಜಾತಿ ಮತ್ತು ಪಂಗಡ ಹಾಗೂ ಪ್ರವರ್ಗ-1 ರ ಅಭ್ಯರ್ಥಿಗಳಿಗೆ 40 ವರ್ಷ ಮೀರಿರಬಾರದು.<br>2 ಪ್ರವರ್ಗ – II(ಎ), II(ಬಿ), III(ಎ), III(ಬಿ) ಅಭ್ಯರ್ಥಿಗಳಿಗೆ 38 ವರ್ಷ ಮೀರಿರಬಾರದು.<br>3 ಸಾಮಾನ್ಯ ಅಭ್ಯರ್ಥಿಗಳಿಗೆ 35 ವರ್ಷ ಮೀರಿರಬಾರದು.<br>4 ವಯಸ್ಸಿನ ಮಿತಿಯನ್ನು ಹಾಲಿ ಕರ್ತವ್ಯ ನಿರ್ವಹಿಸುತ್ತಿರುವ ರಾಜ್ಯ/ ಕೇಂದ್ರ ಸರ್ಕಾರಿ ನೌಕರರು / ಮಾಜಿ ಸೈನಿಕರು / ಅಂಗವಿಕಲ ಅಭ್ಯರ್ಥಿಗಳು / ಹಾಗೂ ವಿಧವೆಯರ ಬಗ್ಗೆ ಕೆ.ಸಿ.ಎಸ್. (ಸಾಮಾನ್ಯ ನೇಮಕಾತಿ ) ನಿಯಮಗಳು 1977 ರ ಪ್ರಕಾರ ಸಡಿಲಿಕೆಯನ್ನು ಕೊಡಲಾಗುವುದು. |

**ಅಭ್ಯರ್ಥಿಗಳಿಗೆ ಸೂಚನೆ ಃ**

1. ಅಭ್ಯರ್ಥಿಗಳು ನಿಗದಿತ ನಮೂನೆಯಲ್ಲಿ ಭರ್ತಿ ಮಾಡಿದ ಅರ್ಜಿಯೊಂದಿಗೆ ಕ್ರಾಸ್ ಮಾಡಿದ ಕೆಳಕಂಡ ಮೊತ್ತದ ಭಾರತೀಯ ಪೋಸ್ಟಲ್ ಆರ್ಡರ್ (IPO) ಅನ್ನು **ವಿಲೇಖನಾಧಿಕಾರಿಗಳು, ನಗರ ಸಿವಿಲ್ ನ್ಯಾಯಾಲಯ, ಬೆಂಗಳೂರು** ರವರ ಹೆಸರಿಗೆ ಪಡೆದು ಸಲ್ಲಿಸಬೇಕು.
   - ಸಾಮಾನ್ಯ ವರ್ಗ, ಪ್ರವರ್ಗ-II(ಎ), II(ಬಿ), III(ಎ), III(ಬಿ)ಕ್ಕೆ ಸೇರಿದ ಅಭ್ಯರ್ಥಿಗಳು – ರೂ. 100/-
   - ಪರಿಶಿಷ್ಠ ಜಾತಿ / ಪರಿಶಿಷ್ಠ ಪಂಗಡ / ಪ್ರವರ್ಗ-1 ಕ್ಕೆ ಸೇರಿದ ಅಭ್ಯರ್ಥಿಗಳು – ರೂ. 25/-.
2. ಖಾಲಿ ಹುದ್ದೆಗಳ ಸಂಖ್ಯೆ ಬದಲಾವಣೆಗೊಳ್ಳುವ ಸಂಭವವಿದೆ.
3. ಒಂದಕ್ಕಿಂತ ಹೆಚ್ಚು ಹುದ್ದೆಗಳಿಗೆ ಅರ್ಜಿ ಸಲ್ಲಿಸಲಿಚ್ಛಿಸುವ ಅಭ್ಯರ್ಥಿಗಳು ಪ್ರತಿ ಹುದ್ದೆಗೂ ಪ್ರತ್ಯೇಕ ಅರ್ಜಿಯನ್ನು ಸಲ್ಲಿಸತಕ್ಕದ್ದು.
4. ಅಭ್ಯರ್ಥಿಯು ಈ ಅಧಿಸೂಚನೆಯಲ್ಲಿ ಲಗತ್ತಿಸಿದ ನಿಗಧಿತ ಅರ್ಜಿ ನಮೂನೆಯಲ್ಲಿ ಬೆರಳಚ್ಚು / ಗಣಕೀಕೃತ ಪ್ರತಿಯಲ್ಲಿ ಅರ್ಜಿಯನ್ನು ತನ್ನ ಕೈ ಬರವಣಿಗೆಯಲ್ಲಿ ಕನ್ನಡ ಭಾಷೆಯಲ್ಲಿ ಮಾತ್ರ ಭರ್ತಿ ಮಾಡಿ ಸಲ್ಲಿಸತಕ್ಕದ್ದು.
5. ಅರ್ಜಿ ನಮೂನೆಯಲ್ಲಿ ತೋರಿಸಿರುವ ಜಾಗದಲ್ಲಿ ಅಭ್ಯರ್ಥಿಯು ತನ್ನ ಇತ್ತೀಚಿನ ಪಾಸ್‌ಪೋರ್ಟ್ ಅಳತೆಯ ಭಾವಚಿತ್ರವನ್ನು ಅಂಟಿಸಿರಬೇಕು.
6. ನೇಮಕಾತಿಯು ತಾತ್ಕಾಲಿಕವಾಗಿದ್ದು 2 ವರ್ಷದ ಪರೀಕ್ಷಾರ್ಹ ಅವಧಿಯನ್ನು ಪೂರ್ಣಗೊಳಿಸಬೇಕಾಗಿರುತ್ತದೆ.
7. ಅಭ್ಯರ್ಥಿಯು ಈಗಾಗಲೇ ಸರ್ಕಾರಿ ನೌಕರಿಯಲ್ಲಿದ್ದರೆ ಅರ್ಜಿಗಳನ್ನು ನೇಮಕಾತಿ ಪ್ರಾಧಿಕಾರದ ಮೂಲಕವೇ ಕಳುಹಿಸಬೇಕು.
8. ಅಂಗವಿಕಲ ಮೀಸಲಾತಿಯಡಿ ನಿಗದಿಪಡಿಸಲಾದ ಅಂಗವೈಕಲ್ಯವುಳ್ಳ ಅಭ್ಯರ್ಥಿಗಳು ಲಭ್ಯವಾಗದಿದ್ದಲ್ಲಿ ಇತರೆ ಅಂಗವೈಕಲ್ಯವುಳ್ಳ ಅಭ್ಯರ್ಥಿಗಳನ್ನು ಆಯ್ಕೆಗೆ ಪರಿಗಣಿಸಲಾಗುವುದು.
9. ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು, 1977 ರ ಪ್ರಕಾರ ಅಥವಾ ಇನ್ನಾವುದೇ ನಿಯಮಗಳ ಪ್ರಕಾರ ಅಭ್ಯರ್ಥಿಯು ಅನರ್ಹನಾಗಿದ್ದಲ್ಲಿ ನೇಮಕಾತಿಗೆ ಅರ್ಹರಾಗುವುದಿಲ್ಲ.
10. ಮೂಲ ಪ್ರಮಾಣ ಪತ್ರಗಳನ್ನು ಸಂದರ್ಶನ ಸಮಯದಲ್ಲಿ ಮಾತ್ರ ಹಾಜರುಪಡಿಸತಕ್ಕದ್ದು.
11. ಅಪೂರ್ಣ ಅರ್ಜಿಗಳನ್ನು ಯಾವ ಪತ್ರ ವ್ಯವಹಾರಕ್ಕೂ ಅವಕಾಶ ನೀಡದೆ ತಿರಸ್ಕರಿಸಲಾಗುವುದು.
12. ಅರ್ಜಿಗಳನ್ನು ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕವು ಸಾರ್ವತ್ರಿಕ ರಜೆಯಾಗಿ ಘೋಷಿತವಾದಲ್ಲಿ ಆ ದಿನಾಂಕದ ಮಾರನೆಯ ಕೆಲಸದ ದಿನವು ಅರ್ಜಿಗಳನ್ನು ಸಲ್ಲಿಸಲು ಕೊನೆಯ ದಿನಾಂಕವಾಗುವುದು.

13. ಭರ್ತಿ ಮಾಡಿದ ಅರ್ಜಿ, ಅಡಕಗಳೊಂದಿಗೆ ಅಭ್ಯರ್ಥಿಗಳು ಸ್ವ–ವಿಳಾಸ ಬರೆದ **ಅಂಚೆ ಚೀಟಿ ರಹಿತ** ಲಕೋಟೆಯನ್ನು ಸಲ್ಲಿಸುವುದು.
14. ಭರ್ತಿ ಮಾಡಿದ ಅರ್ಜಿಗಳನ್ನು ಈ ನ್ಯಾಯಾಲಯದ ಕಛೇರಿಯಲ್ಲಿ ಕರ್ತವ್ಯದ ದಿನಗಳಂದು ಸಂಜೆ 4.00 ಗಂಟೆಯವರೆಗೆ ಮಾತ್ರ ಸ್ವೀಕರಿಸಲಾಗುವುದು.
15. ಕೊನೆಯ ದಿನಾಂಕದ ನಂತರ ಅಂಚೆ ಮೂಲಕ ಬಂದ ಅರ್ಜಿಗಳನ್ನಾಗಲಿ ಅಥವಾ ಖುದ್ದಾಗಿ ಅಭ್ಯರ್ಥಿಗಳು ಸಲ್ಲಿಸುವ ಅರ್ಜಿಗಳನ್ನಾಗಲೀ ಈ ಕಛೇರಿಯಲ್ಲಿ ಪರಿಗಣಿಸಲಾಗುವುದಿಲ್ಲ / ಸ್ವೀಕರಿಸಲಾಗುವುದಿಲ್ಲ.

**ಅಭ್ಯರ್ಥಿಗಳು ಅರ್ಜಿಯೊಂದಿಗೆ ಕೆಳಕಂಡ ದಾಖಲಾತಿಗಳ ಸ್ವಯಂ ದೃಢೀಕೃತ ನಕಲನ್ನು ಸಲ್ಲಿಸತಕ್ಕದ್ದು. ತಪ್ಪಿದಲ್ಲಿ ಯಾವ ಸೂಚನೆಯನ್ನೂ ನೀಡದೆ ಅರ್ಜಿಗಳನ್ನು ತಿರಸ್ಕರಿಸಲಾಗುವುದು.**

1. ಹುಟ್ಟಿದ ದಿನಾಂಕದ ಬಗ್ಗೆ ಎಸ್.ಎಸ್.ಎಲ್.ಸಿ. ಅಂಕಪಟ್ಟಿ, ಜನನ ಪ್ರಮಾಣ ಪತ್ರ ಅಥವಾ ಶಾಲಾ ವರ್ಗಾವಣೆ ಪತ್ರ ಇತ್ಯಾದಿ.
2. ವಿದ್ಯಾರ್ಹತೆ ಬಗ್ಗೆ ಸಂಬಂಧಿತ ಅಂಕಪಟ್ಟಿಗಳ ದೃಡೀಕೃತ ನಕಲು.
3. ಈಗಾಗಲೇ ಸರ್ಕಾರಿ ಸೇವೆಯಲ್ಲಿರುವವರು ಸಂಬಂಧಿತ ನೇಮಕಾತಿ ಪ್ರಾಧಿಕಾರದಿಂದ ಪಡೆದ ಸೇವಾ ದೃಢೀಕರಣ ಪತ್ರ.
4. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರಿದ ಅಭ್ಯರ್ಥಿಗಳು ನಿಗದಿತ ನಮೂನೆ 'ಡಿ' ಯಲ್ಲಿ ಪಡೆದ ಜಾತಿ ಪ್ರಮಾಣ ಪತ್ರ.
5. ಪ್ರವರ್ಗ–I ಕ್ಕೆ ಸೇರಿದ ಅಭ್ಯರ್ಥಿಗಳು ನಿಗದಿತ ನಮೂನೆ 'ಇ' ನಲ್ಲಿ ಪಡೆದ ಜಾತಿ ಪ್ರಮಾಣ ಪತ್ರ.
6. ಪ್ರವರ್ಗ II–ಎ, II–ಬಿ, III–ಎ ಮತ್ತು III–ಬಿ ವರ್ಗಕ್ಕೆ ಸೇರಿದ ಅಭ್ಯರ್ಥಿಗಳು ಸರ್ಕಾರಿ ಅಧಿಸೂಚನೆ ಸಂಖ್ಯೆಃ ಎಸ್.ಡಬ್ಲ್ಯೂ.ಡಿ. 126 ಬಿಸಿಎ 2002 ದಿ. 13–2–2003 ರಲ್ಲಿ ನಿಗದಿಪಡಿಸಿರುವ ನಮೂನೆ 'ಎಫ್' ಪ್ರಕಾರ ಸಂಬಂಧಿತ ತಹಸೀಲ್ದಾರ್‌ರವರು ನೀಡಿರುವ ಜಾತಿ ಮತ್ತು ಆದಾಯ ದೃಢೀಕರಣ ಪತ್ರ.
7. ಮಹಿಳಾ ಮೀಸಲಾತಿಯಡಿ ಮೀಸಲಾತಿ ಬಯಸುವ ಅಭ್ಯರ್ಥಿಗಳು ಅರ್ಜಿ ನಮೂನೆಯಲ್ಲಿರುವ ಕಾಲಂ ನಂ. 6 ರಲ್ಲಿ ಕಡ್ಡಾಯವಾಗಿ **ಮಹಿಳಾ ಅಭ್ಯರ್ಥಿ**ಯೆಂದು ನಮೂದಿಸತಕ್ಕದ್ದು.
8. ಗ್ರಾಮೀಣ ಮೀಸಲಾತಿ ಕೋರುವ ಅಭ್ಯರ್ಥಿಗಳು ಸರ್ಕಾರಿ ಆದೇಶ ಸಂಖ್ಯೆ ಸಿಆಸುಇ 06 ಸೇನೆನಿ 2001 ದಿ. 13–2–2001 ರಲ್ಲಿ ನಿಗದಿಪಡಿಸಿರುವ ನಮೂನೆ 1 & 2 ಅನ್ನು 1 ರಿಂದ 10ನೇ ತರಗತಿಯವರೆಗೆ ವ್ಯಾಸಂಗ ಮಾಡಿದ ಸಂಬಂಧಿತ ಶಾಲಾ ಮುಖ್ಯೋಪಾಧ್ಯಾಯರಿಂದ ಪಡೆದು ಕ್ಷೇತ್ರ ಶಿಕ್ಷಣಾಧಿಕಾರಿಗಳವರಿಂದ ಮೇಲುರುಜು ಮಾಡಿಸಿದ ಪ್ರಮಾಣ ಪತ್ರ.
9. ಕನ್ನಡ ಮಾಧ್ಯಮ ಮೀಸಲಾತಿ ಕೋರುವ ಅಭ್ಯರ್ಥಿಗಳು ಸರ್ಕಾರಿ ಆದೇಶ ಸಂಖ್ಯೆ ಸಿಆಸುಇ 97 ಸೇನೆನಿ 2002 ದಿ. 22–11–2002 ರಲ್ಲಿ ನಿಗದಿಪಡಿಸಿರುವ ನಮೂನೆಯನ್ನು 1 ರಿಂದ 10ನೇ ತರಗತಿಯವರೆಗೆ ವ್ಯಾಸಂಗ ಮಾಡಿದ ಸಂಬಂಧಿತ ಶಾಲಾ ಮುಖ್ಯೋಪಾಧ್ಯಾಯರಿಂದ ಪಡೆದು ಕ್ಷೇತ್ರ ಶಿಕ್ಷಣಾಧಿಕಾರಿಗಳವರಿಂದ ಮೇಲುರುಜು ಮಾಡಿಸಿದ ಪ್ರಮಾಣ ಪತ್ರ.
10. ಮಾಜಿ ಸೈನಿಕ ಅಭ್ಯರ್ಥಿಗಳು ಸೇನೆಯಿಂದ ವಿಮುಕ್ತಿಗೊಂಡ ಬಗ್ಗೆ ಸಂಬಂಧಿತ ಅಧಿಕಾರಿಗಳು ನೀಡಿರುವ ಪ್ರಮಾಣ ಪತ್ರ.
11. ಅಂಗವಿಕಲ ಮೀಸಲಾತಿಯಡಿ ಅರ್ಜಿ ಸಲ್ಲಿಸುವ ಅಭ್ಯರ್ಥಿಗಳು ನಿಗದಿತ ನಮೂನೆಯಲ್ಲಿ ಜಿಲ್ಲಾ ವೈದ್ಯಾಧಿಕಾರಿಗಳಿಂದ ಪಡೆದ ವೈದ್ಯಕೀಯ ಪ್ರಮಾಣಪತ್ರ.
12. ಯೋಜನಾ ನಿರಾಶ್ರಿತ ಅಭ್ಯರ್ಥಿಗಳು ಸರ್ಕಾರಿ ಆದೇಶ ಸಂಖ್ಯೆ ಸಿಆಸುಇ 44 ಸೇನೆನಿ 2001 ದಿನಾಂಕಃ 27–7–2001ರ ಪ್ರಕಾರ ಪಡೆದ ನಿಗದಿತ ಪ್ರಮಾಣ ಪತ್ರ.
13. ಅಭ್ಯರ್ಥಿಗಳು ಅರ್ಜಿಗಳೊಂದಿಗೆ ಲಗತ್ತಿಸುವ ಅಡಕಗಳನ್ನು ಸ್ವಯಂ ದೃಡೀಕರಿಸಿ ಸಲ್ಲಿಸತಕ್ಕದ್ದು, **ಸ್ವಯಂ ದೃಡೀಕರಣವಿಲ್ಲದೆ ಸಲ್ಲಿಸುವ ಅರ್ಜಿಗಳನ್ನು ತಿರಸ್ಕರಿಸಲಾಗುವುದು.**

ಪ್ರಧಾನ ನಗರ ಸಿವಿಲ್ ಮತ್ತು ಸತ್ರ ನ್ಯಾಯಾಧೀಶರ ಆದೇಶದ ಮೇರೆಗೆ,
**ವಿಲೇಖನಾಧಿಕಾರಿಗಳು,**
ನಗರ ಸಿವಿಲ್ ನ್ಯಾಯಾಲಯ, ಬೆಂಗಳೂರು.

## ನಗರ ಸಿವಿಲ್ ನ್ಯಾಯಾಲಯ, ಬೆಂಗಳೂರು

## ಅರ್ಜಿ ನಮೂನೆ

ನಿಮ್ಮ ಇತ್ತೀಚಿನ ಪಾಸ್‌ಪೋರ್ಟ್ ಅಳತೆಯ ಭಾವಚಿತ್ರವನ್ನು ಇಲ್ಲಿ ಅಂಟಿಸಿ

**ಅಧಿಸೂಚನೆ ಸಂಖ್ಯೆ ಮತ್ತು ದಿನಾಂಕಃ ಎ.ಡಿ.ಎಂ.– I(ಎ) /13 ದಿಃ 22.11.2013**

**ಹುದ್ದೆಯ ಹೆಸರು :** ______________________

| | | |
|---|---|---|
| 1 | ಅಭ್ಯರ್ಥಿಯ ಪೂರ್ಣ ಹೆಸರು<br>(10ನೇ ತರಗತಿ ಅಂಕಪಟ್ಟಿಯಲ್ಲಿರುವಂತೆ) | |
| 2 | ತಂದೆಯ / ಗಂಡನ / ಪೋಷಕರ ಹೆಸರು | |
| 3 | ಲಿಂಗ<br>(ಗಂಡು ಅಥವಾ ಹೆಣ್ಣು ಅನ್ವಯಿಸುವುದನ್ನು ಮಾತ್ರ ಬರೆಯಿರಿ) | |
| 4 | ಹುಟ್ಟಿದ ದಿನಾಂಕ | |
| 5 | ಕೋರಲು ಬಯಸುವ ಮೀಸಲಾತಿ (ಅನ್ವಯಿಸುವುದನ್ನು ಮಾತ್ರ ಬರೆಯಿರಿ) (ಪ್ರವರ್ಗ– I, II(ಎ), II(ಬಿ), III(ಎ), III(ಬಿ), ಎಸ್.ಸಿ., ಎಸ್.ಟಿ., ಜಿ.ಎಂ.) | |

| | | |
|---|---|---|
| 6 | ಕೋರಲು ಬಯಸುವ ಒಳ ಮೀಸಲಾತಿ.<br>(ಗ್ರಾಮೀಣ / ಕನ್ನಡ ಮಾಧ್ಯಮ / ಮಾಜಿ ಸೈನಿಕ / ಅಂಗವಿಕಲ / ಯೋಜನಾ ನಿರಾಶ್ರಿತರು / ಮಹಿಳಾ ಅಭ್ಯರ್ಥಿ / ಇತರೆ) | |
| 7 | ವಯೋಮಿತಿ ಸಡಿಲಿಕೆ ಕೋರುತ್ತೀರಾ? ಹಾಗಿದ್ದಲ್ಲಿ ಸೂಕ್ತ ದಾಖಲಾತಿಗಳನ್ನು ಸಲ್ಲಿಸತಕ್ಕದ್ದು. | |
| 8 | ಪ್ರಸ್ತುತ ಸರ್ಕಾರಿ ಸೇವೆಯಲ್ಲಿರುವಿರೆ ? ಹಾಗಿದ್ದಲ್ಲಿ ಅದರ ಬಗ್ಗೆ ವಿವರಣೆ (ಇಲಾಖೆಯ ಹೆಸರು, ಹುದ್ದೆಯ ಹೆಸರು, ಸೇವಾ ಅವಧಿ) (ನಿರಾಕ್ಷೇಪಣಾ ಪತ್ರದ ಪ್ರತಿಯನ್ನು ಕಡ್ಡಾಯವಾಗಿ ಲಗತ್ತಿಸುವುದು) | |
| 9 | ಅಭ್ಯರ್ಥಿಯ ಖಾಯಂ ಅಂಚೆ ವಿಳಾಸ | |
| 10 | ದೂರವಾಣಿ / ಮೊಬೈಲ್ ಸಂಖ್ಯೆ (ಇದ್ದಲ್ಲಿ) | |
| 11 | ವಿವಾಹಿತರಾಗಿದ್ದಲ್ಲಿ ಒಬ್ಬರಿಗಿಂತ ಹೆಚ್ಚು ಜೀವಂತ ಪತಿ / ಪತ್ನಿ ಇದ್ದಾರೆಯೇ ? | |
| 12 | ನೀವು ಯಾವುದಾದರೂ ಕ್ರಿಮಿನಲ್ ಮೊಕದ್ದಮೆಯಲ್ಲಿ ಭಾಗಿಯಾಗಿದ್ದೀರ ? | |
| 13 | ಅರ್ಜಿ ಶುಲ್ಕ ಸಲ್ಲಿಸಿದ ಬಗ್ಗೆ ವಿವರ ಃ<br>ಅ) ಐ.ಪಿ.ಓ. ಸಂಖ್ಯೆ ಮತ್ತು ದಿನಾಂಕ ಃ<br>ಆ) ಐ.ಪಿ.ಓ. ಮೊಬಲಗು ಃ<br>ಇ) ಐ.ಪಿ.ಓ. ಪಡೆದ ಅಂಚೆ ಕಛೇರಿಯ ಹೆಸರು ಃ | |

14. ಶೈಕ್ಷಣಿಕ ವಿದ್ಯಾರ್ಹತೆಯ ಬಗ್ಗೆ ವಿವರಣೆ (ಅನ್ವಯಿಸುವುದನ್ನು ಮಾತ್ರ ಭರ್ತಿ ಮಾಡಿ) ಃ

| ವಿದ್ಯಾರ್ಹತೆ | ಉತ್ತೀರ್ಣರಾದ ವರ್ಷ | ಗರಿಷ್ಠ ಅಂಕ | ಗಳಿಸಿದ ಅಂಕ | ಶೇಕಡಾವಾರು ಅಂಕ | ಅಭ್ಯಸಿಸಿದ ಶಾಲಾ/ ಸಂಸ್ಥೆಯ ವಿಳಾಸ |
|---|---|---|---|---|---|
| ಎಸ್. ಎಸ್. ಎಲ್. ಸಿ. | | | | | |
| ಆಂಗ್ಲ ಬೆರಳಚ್ಚು (ಕಿರಿಯ ಶ್ರೇಣಿ) | | | | | |
| ಆಂಗ್ಲ ಬೆರಳಚ್ಚು (ಹಿರಿಯ ಶ್ರೇಣಿ) | | | | | |
| ಕನ್ನಡ ಬೆರಳಚ್ಚು (ಹಿರಿಯ ಶ್ರೇಣಿ) | | | | | |
| ಆಂಗ್ಲ ಶೀಘ್ರಲಿಪಿ (ಹಿರಿಯ ಶ್ರೇಣಿ) | | | | | |
| ಕನ್ನಡ ಶೀಘ್ರಲಿಪಿ (ಹಿರಿಯ ಶ್ರೇಣಿ) | | | | | |

| | | |
|---|---|---|
| 15 | 14ನೇ ಅಂಕಣದಲ್ಲಿ ತೋರಿಸಿರುವುದಕ್ಕಿಂತ ಹೆಚ್ಚಿನ ವಿದ್ಯಾರ್ಹತೆ ಹೊಂದಿದ್ದಲ್ಲಿ ಅದರ ವಿವರ | |

ಮೇಲಿನ ಅರ್ಜಿಯಲ್ಲಿ ತಿಳಿಸಿರುವ ಎಲ್ಲಾ ವಿಷಯಗಳು ನನಗೆ ತಿಳಿದಿರುವ ಮಟ್ಟಿಗೆ ಸತ್ಯ, ಪೂರ್ಣ ಮತ್ತು ಸರಿಯಿದೆ ಎಂದು ಈ ಮೂಲಕ ಘೋಷಿಸುತ್ತೇನೆ. ನಾನು ಸೂಚನೆಗಳನ್ನು ಗಮನವಿಟ್ಟು ಓದಿದ್ದೇನೆ ಮತ್ತು ಅವುಗಳನ್ನು ಪಾಲಿಸಲು ವಿಧೇಯನಾಗಿರುತ್ತೇನೆ. ನಿಯಮ 20 ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳ ಪ್ರಕಾರ ಒಂದು ವೇಳೆ ನಾನು ಸಲ್ಲಿಸಿರುವ ಮಾಹಿತಿಗಳು ಅಸತ್ಯವಾಗಿದ್ದಲ್ಲಿ ಹುದ್ದೆಯ ಆಯ್ಕೆಯ ಮೊದಲು ಅಥವಾ ಅನಂತರ ನನ್ನ ಮೇಲೆ ಯಾವುದೇ ಕ್ರಮ ಕೈಗೊಳ್ಳಬಹುದು.

ದಿನಾಂಕಃ
ಸ್ಥಳ ಃ

ಅಭ್ಯರ್ಥಿಯ ಸಹಿ
(ಸಹಿ ಮಾಡದ ಅರ್ಜಿಗಳನ್ನು ತಿರಸ್ಕರಿಸಲಾಗುವುದು)

**ಕಛೇರಿಯ ಉಪಯೋಗಕ್ಕೆ ಮಾತ್ರ**

ಅರ್ಜಿಯು ಸರಿಯಾಗಿರುತ್ತದೆ.

ಅರ್ಜಿ ಶುಲ್ಕ ರೂ. /–
ಐ.ಪಿ.ಓ. ಮೂಲಕ ಸ್ವೀಕರಿಸಿದೆ.

ಅರ್ಜಿಯಲ್ಲಿ ಕೆಳಕಂಡ ನ್ಯೂನತೆಗಳಿವೆ,
ಆದ್ದರಿಂದ ತಿರಸ್ಕರಿಸಬಹುದು
1.
2.
3.

ಗಣಕೀಕರಿಸಿದವರ ಸಹಿ.

## IN THE COURT OF THE IV ADDITIONAL CITY CIVIL JUDGE, MAYOHALL UNIT, BANGALORE

**P & SC No. 25018/2013. Hg. Dated : 22-01-2014.**

**PETITIONER :**

1. **MRS. ARUNA CHIDAMI,** aged about 66 years, presently residing #5,, Tirumal Rao Gardens, Off Nandidurga Road, Bangalore-560 046.
2. **MR. S. MADHAVAN,** aged about 61 years, presently residing # 127, 2nd Cross, V Block, Koramangala, Bangalore-560 095

**V/s**

**RESPONDENT/S : Nil**

**PUBLIC NOTICE**

Notice is hereby given that a petition has been made to this Hon'ble Court, for a grant of Succession Certificate to the petitioners above named Under Section 372 of the Indian Succession Act, 1925, to the Estate of the deceased Ranganayaki Sampath Kumaran, who died at Bangalore on the 17th day of June 2005.

Be it known that no caveat has been entered and the said petition is posted for hearing on the 22-01-2014 and all persons claiming to have any interest in the Estate of the above named deceased may come and see the proceedings before the grant of Succession Certificate.

**SECURITIES IN DEMAT ACCOUNT**

DP Id No. IN301313, ID No. 20396763 Aditya Birla Nuvo Ltd-2, shares-Rs. 2,266/- Larsen and Turbo Ltd-160 shares-Rs. 2,46,880/-, Tata Chemicals Ltd.,-251 shares-Rs, 93,121, Ultratech Cement Ltd-32 shares-Rs. 60,880/-.

Aditya Birla Nuvo Ltd., previously known as The Indian Rayon Corporation Ltd-5, shares-Folio No. R-15395A-Certificate No. 225230, Rs. 5,275/- Ultratech Cement Ltd-13 shares-Folio No. 81398658-Certificate No. 00240791-Rs. 24,687/- Grasim Industries Ltd-24 shares-Folio No. 0689811-Certificate No. 2068325-Rs. 77,424/-.

Given under my hand and the seal of this court this 29th day of October 2013.

By Order of Court,
**ASSISTANT REGISTRAR,**
City Civil Court, Mayo Hall Unit, Bangalore.

**P.D. 67**
**SC-05**

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಬೆಂಗಳೂರು–9

**ಅಧಿಸೂಚನೆ ಸಂಖ್ಯೆ: ಎನ್‌ಆರ್‌ಎಸ್(4)/19/2011–12, ದಿನಾಂಕ: 28ನೇ ಜೂನ್, 2013**

ಶ್ರೀ **ಭಾಗಣ್ಣ ಯಲ್ಲಪ್ಪ ಸಮಗಾರ, ಶುಶ್ರೂಷಕರಾಗಿ** ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ **ತಾಲ್ಲೂಕು ಆಸ್ಪತ್ರೆ, ಸಿಂಧಗಿ, ಬಿಜಾಪುರ ಜಿಲ್ಲೆ,** ಇಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಇವರ ಹೆಸರನ್ನು **ಭಾಗಣ್ಣ ಯಲ್ಲಪ್ಪ ನಾಗಠಾಣ** ಎಂದು ಬದಲಾವಣೆಗೆ ಅನುಮತಿ ನೀಡಲಾಗಿದೆ.

**P.D. C/n. 146**
**SC 10**

**ನಿರ್ದೇಶಕರು,**
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು

**FORM – I**
**(See Rule 9)**
**DEPARTMENT OF EDUCATION**
**BLOCK EDUCATION OFFICE, HAVERI**
**NOTIFICATION, DATED: 24-05-2013**

**Shri SHEKHARAGOUDA SHIVANAGOUDA SHIVANAGOUDA** Working as Assistant Teacher in the Education Department of/Office of Block Education Office, Haveri is permitted to change his/her Name to **SHEKHARAGOUDA SHIVANAGOUDA PATIL.**

**PD c/n-147**
**SC 10**

**Signature and Designation of the Appointing Authority**

**FORM-IV**

(See Rule 12)

**NOTICE**

It is hereby notified that the undersigned has changed his/her name from **SHIVANAND. KRISHNA. LAMANI** to **SHIVANAND. KRISHNA. RATHOD.**

**P.D. c/n. 148**
**SC - 10**

**SHIVANAND.KRISHNA.LAMANI**

**FORM-IV**

(See Rule 12)

**NOTICE**

It is hereby notified that the undersigned has changed his/her name from **VEERAYYA CHANABASAYYA KALIWAL** to **VEERAYYA CHANABASAYYA KALIWALMATH.**

**P.D. c/n. 149** **VEERAYYA CHANABASAYYA KALIWAL**
**SC - 10**

**FORM-IV**

(See Rule 12)

**NOTICE**

It is hereby notified that the undersigned has changed his/her name from **SMT. SUVARNA DEVI V.M.** to **SMT. SUVARNA MAHADEV V.M.**

**P.D. C/n. 150**
**SC - 10** **SUVARNA DEVI V.M.**

**FORM-IV**

(See Rule 12)

**NOTICE**

It is hereby notified that the undersigned has changed his/her name from **SHANKRAPPA LAYAPPA HARIJAN** to **SHANKRAPPA LAYAPPA HADIMANI.**

**P.D . C/n. 151** **SHANKRAPPA LAYAPPA HARIJAN**
**SC - 10**

**FORM – I**

**(See Rule 9)**

**DEPARTMENT OF POLICE**

**OFFICE OF THE SUPERINTENDENT OF POLICE, BIJAPUR**

**NOTIFICATION, DATED: 06-11-2013**

**SHRI RAJESA HUSENSA AWATI** Working as CHC-989, in the Police Department of/office of The Superintendent of Police, Bijapur District is permitted to change his Name to **RAJAHMAD HUSENSA AWATI.**

**PD c/n-152** **Superintendent of Police, Bijapur**
**SC -10**

**FORM-IV**

(See Rule 12)

**NOTICE**

It is hereby notified that the undersigned has changed his/her name from **SHASHIKANT** to **SHASHIKANT HOLKAR.**

**P.D. C/n. 153** **SHASHIKANT**
**SC - 10**

**FORM – I**

**(See Rule 9)**

**DEPARTMENT OF POLICE**

**OFFICE OF THE COMMANDANT, KARNATAKA STATE RESERVE POLICE,**

**10$^{TH}$ BN, SHIGGAON, DISTRICT, HAVERI**

**NOTIFICATION No. 127/EST-(1)/2013-14, DATED: 28-09-2013**

**SHRI HANUMANTHA** Working as working as Police Constable, in the Police Department of the office of The Commandant, 10$^{th}$ Bn, K.S.R.P., Shiggaon, is permitted to change his Name to **HANUMANTHAPPA ARER.**

**PD c/n-154** **Commandant,**
**SC - 10** **10$^{th}$ Bn, K.S.R.P. Shiggon**

**FORM-IV**

(See Rule 12)

**NOTICE**

It is hereby notified that the undersigned has changed his/her name from **VITTAL LACHAPPA MADAR** to **VITTAL LACHAPPA SAMPANNAVAR.**

**P.D C/n. 155** **VITTAL LACHAPPA MADAR**
**SC - 10**

## ಅಧ್ಯಕ್ಷರು, ಗ್ರಾಮಲೆಕ್ಕಿಗರ ನೇಮಕಾತಿ ಮತ್ತು ಆಯ್ಕೆ ಪ್ರಾಧಿಕಾರ ಹಾಗೂ ಜಿಲ್ಲಾಧಿಕಾರಿಗಳು ಕೋಲಾರ ಜಿಲ್ಲೆ, ಕೋಲಾರ

### ಅಧಿಸೂಚನೆ

**ಅಧಿಸೂಚನೆ ಸಂಖ್ಯೆ: ಸಿಬ್ಬಂದಿ(2) ಸಿಆರ್:61/2013–14 ದಿನಾಂಕ 27/11/2013**

**ವಿಷಯ:** ಕೋಲಾರ ಜಿಲ್ಲಾ ಕಂದಾಯ ಇಲಾಖೆಯಲ್ಲಿ ಖಾಲಿ ಇರುವ ಗ್ರಾಮಲೆಕ್ಕಿಗರ ಹುದ್ದೆಗಳನ್ನು ನೇರನೇಮಕಾತಿ ಮೂಲಕ ಭರ್ತಿ ಮಾಡುವ ಬಗ್ಗೆ

**ಉಲ್ಲೇಖ:** 1. ಸರ್ಕಾರದ ಅಧಿಸೂಚನೆ ನಂ. ಆರ್‌ಡಿ 299 ಬಿಎಸ್‌ಸಿ 2006 ದಿನಾಂಕ 3/2/2009

2. ಸರ್ಕಾರದ ಆದೇಶ ಸಂಖ್ಯೆ ಸಿಆಸುಇ. 08. ಸೆಹಿಮ.95 ದಿ: 20/6/95
3. ಸರ್ಕಾರದ ಆದೇಶ ಸಂಖ್ಯೆ ಸಿಆಸು 53 ಸೆನೆನಿ 2007, ದಿನಾಂಕ 4/1/2008
4. ಸರ್ಕಾರದ ಪತ್ರ ನಂ. ಕಂಇ 4 ಬಿಎಸ್‌ಸಿ 2011 ದಿನಾಂಕ 25/2/2011
5. ಸರ್ಕಾರಿ ಆದೇಶ ಸಂಖ್ಯೆ ಸಿಆಸುಇ 128 ಸೆನೆನಿ 2006 ದಿನಾಂಕ 1/8/2009
6. ಅಧಿಸೂಚನೆ ಸಂಖ್ಯೆ ಡಿಪಿಎಆರ್ 54 ಎಸ್‌ಆರ್‌ಆರ್ 2012 ದಿನಾಂಕ 23/6/2012

ಕೋಲಾರ ಜಿಲ್ಲಾ ಘಟಕ, ಕಂದಾಯ ಇಲಾಖೆಯಲ್ಲಿ ಖಾಲಿ ಇರುವ ಗ್ರಾಮಲೆಕ್ಕಿಗರ ಹುದ್ದೆಗಳನ್ನು ನೇರನೇಮಕಾತಿ ಮೂಲಕ ಭರ್ತಿ ಮಾಡಲು ಉಲ್ಲೇಖ (4) ರಂತೆ ಸರ್ಕಾರ ಅನುಮತಿ ನೀಡಿರುತ್ತದೆ. ಜಿಲ್ಲಾ ಕಂದಾಯ ಘಟಕದಲ್ಲಿ ವಿವಿಧ ಕಾರಣಗಳಿಂದ ಖಾಲಿ ಇರುವ ಹಾಗೂ ತೆರವಾಗಲಿರುವ ಗ್ರಾಮಲೆಕ್ಕಿಗರ 66 ಹುದ್ದೆಗಳನ್ನು ನೇರನೇಮಕಾತಿ ಮೂಲಕ ತುಂಬಲು ಉದ್ದೇಶಿಸಿ, ಸದರಿ ಗ್ರಾಮಲೆಕ್ಕಿಗರ ಹುದ್ದೆಗಳನ್ನು ವರ್ಗೀಕರಣ ಮತ್ತು ಮೀಸಲಾತಿ ಅನ್ವಯ ಕರ್ನಾಟಕ ನಾಗರೀಕ ಸೇವೆಗಳು (ರೆವಿನ್ಯೂ ಸಬಾರ್ಡಿನೇಟ್ ಬ್ರಾಂಚ್) (ಕೇಡರ್ ಅಂಡ್ ರಿಕ್ರೂಟ್‌ಮೆಂಟ್) (ತಿದ್ದುಪಡಿ) ನಿಯಮಗಳು 2008 ರನ್ವಯ ನೇರನೇಮಕಾತಿ ಮೂಲಕ ಭರ್ತಿಮಾಡಲು ಅರ್ಹ ಹಾಗೂ ಅಸಕ್ತ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆನ್‌ಲೈನ್‌ನಲ್ಲಿ ಅಹ್ವಾನಿಸಲಾಗಿದೆ.

**1. ಹುದ್ದೆಗಳ ವಿವರ, ವಿದ್ಯಾರ್ಹತೆ ಮತ್ತು ವೇತನಶ್ರೇಣಿ**

| ಕ್ರ. ಸಂ. | ಹುದ್ದೆಯ ಹೆಸರು | ಒಟ್ಟು ಖಾಲಿ ಹುದ್ದೆಗಳು | ವಿದ್ಯಾರ್ಹತೆ | ವೇತನಶ್ರೇಣಿ |
|---|---|---|---|---|
| 1 | ಗ್ರಾಮಲೆಕ್ಕಿಗರು | 66 | ಪಿಯುಸಿ ಅಥವಾ ಸಿಬಿಎಸ್‌ಇ/ಐಸಿಎಸ್‌ಇ ನಡೆಸಿರುವ 12ನೇ ತರಗತಿ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು | 11600–200–12000–250–13000–300–14200–350–15600–400–17200–450–19000–500–21000 |

**ಷರಾ:** Must have passed Pre-University Examiniation or 12th standard examination conducted by Central Board of Secondary Education or ICSE (Notification No. RD 299 BSC 2006 dt: 24/7/09)

**2. ಮೀಸಲಾತಿ ವರ್ಗೀಕರಣ**

ಈ ಹಿಂದಿನ ನೇಮಕಾತಿ ಅವಧಿಯಲ್ಲಿ ಅಂದರೆ 2012–13ರ ಸಾಲಿನಲ್ಲಿ ನಡೆದ ಗ್ರಾಮಲೆಕ್ಕಿಗರ ನೇರನೇಮಕಾತಿ ಸಂದರ್ಭದಲ್ಲಿ ಪ.ಜಾ. (ಗ್ರಾಮೀಣ) ಪ್ರವರ್ಗಕ್ಕೆ ಸೇರಿದ ಭರ್ತಿಯಾಗದ ಒಂದು (ಬ್ಯಾಕ್‌ಲಾಗ್) ಹುದ್ದೆಯೂ ಸೇರಿದಂತೆ 2013–14ನೇ ಸಾಲಿನಲ್ಲಿ ಖಾಲಿ ಇರುವ ಗ್ರಾಮಲೆಕ್ಕಿಗರ ಹುದ್ದೆಗಳ ವರ್ಗೀಕರಣ ಕೆಳಕಂಡಂತ್ತಿರುತ್ತೆ.

1. ಪ.ಜಾ. (ಗ್ರಾಮೀಣ) – ಬ್ಯಾಕ್‌ಲಾಗ್ ಹುದ್ದೆ –1
2. ಸರ್ಕಾರದ ಆದೇಶ ದಿನಾಂಕ 20/6/95 ರ ಅನ್ವಯ ರೋಸ್ಟರ್ ಸಂಖ್ಯೆ 1 ರಿಂದ 65 ಒಟ್ಟು 66 ಹುದ್ದೆಗಳು)

| ಕ್ರಸಂ | ಮೀಸಲಾತಿ | ಸಾಮಾನ್ಯ | ಮಹಿಳೆ | ಗ್ರಾಮೀಣ | ಅಂಗವಿಕಲ | ಮಾಜಿಸೈನಿಕ | ಕನ್ನಡ ಮಾಧ್ಯಮ | ಯೋಜನಾ ನಿರಾಶ್ರಿತರು | ಒಟ್ಟು |
|---|---|---|---|---|---|---|---|---|---|
| 1 | ಪರಿಶಿಷ್ಟ ಜಾತಿ | 2 | 3 | 3 | 1 | 1 | – | 1 | **11** |
| 2 | ಪರಿಶಿಷ್ಟ ಪಂಗಡ | – | 1 | – | 1 | – | – | – | **2** |
| 3 | ಪ್ರವರ್ಗ 1 | 1 | 1 | 1 | – | – | – | – | **3** |
| 4 | ಪ್ರವರ್ಗ 2(ಎ) | 2 | 3 | 2 | 1 | 1 | – | 1 | **10** |
| 5 | ಪ್ರವರ್ಗ 2(ಬಿ) | 1 | 1 | 1 | – | – | – | – | **3** |
| 6 | ಪ್ರವರ್ಗ 3(ಎ) | – | 1 | 1 | – | – | – | – | **2** |
| 7 | ಪ್ರವರ್ಗ 3(ಬಿ) | 1 | 1 | 1 | – | – | – | – | **3** |
| 8 | ಸಾಮಾನ್ಯ | 7 | 10 | 7 | 1 | 3 | 2 | 2 | **32** |
| ಒಟ್ಟು | | **14** | **21** | **16** | **4** | **5** | **2** | **4** | **66** |

**3. ಅಭ್ಯರ್ಥಿಗಳಿಗೆ ಸೂಚನೆ**

1. **ಅರ್ಜಿ ನಮೂನೆ:**

ಅರ್ಹ ಅಭ್ಯರ್ಥಿಗಳು ಅರ್ಜಿಗಳನ್ನು ಈ ಕೆಳಕಂಡ ವೈಬ್‌ಸೈಟ್‌ನಲ್ಲಿ ಅನ್‌ಲೈನ್ (online) ಮೂಲಕ ಮಾತ್ರ ಸಲ್ಲಿಸಬೇಕಾಗಿರುತ್ತದೆ. ಅರ್ಜಿಯನ್ನು ಜಿಲ್ಲಾಧಿಕಾರಿಗಳ ಕಛೇರಿಯಿಂದ ಒದಗಿಸಲಾಗುವುದಿಲ್ಲ. ಹಾಗೂ ಯಾವುದೇ ಕಾರಣಕ್ಕೂ ನೊಂದಾಯಿತ ಅಂಚೆ, ಸಾಮಾನ್ಯ ಅಂಚೆ, ಕೊರಿಯರ್ ಅಥವಾ ಇಮೇಲ್ ಮೂಲಕ ಸಲ್ಲಿಸುವ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

ವೆಬ್‌ಸೈಟ್ http://kolar-va.kar.nic.in

ಅಭ್ಯರ್ಥಿಯು ಜಿಲ್ಲಾಧಿಕಾರಿಗಳು ಕೋಲಾರ ಜಿಲ್ಲೆ ರವರ ಮೇಲ್ಕಂಡ ಅಧಿಕೃತ ವೆಬ್‌ಸೈಟ್‌ನಲ್ಲಿ ಆನ್‌ಲೈನ್ ಮುಖಾಂತರ ಪ್ರವೇಶಿಸಿದಾಗ ಕಂಡು ಬರುವ **"ಗ್ರಾಮ ಲೆಕ್ಕಿಗರ ನೇರ ನೇಮಕಾತಿ ಅರ್ಜಿ"** ಎಂಬುದರ ಮೇಲೆ ಕ್ಲಿಕ್ ಮಾಡಿದಲ್ಲಿ ಕಂಪ್ಯೂಟರ್ ಪರದೆಯ ಮೇಲೆ ಕಾಣುವ ಅರ್ಜಿಯನ್ನು ಭರ್ತಿ ಮಾಡಬೇಕು. ಅರ್ಜಿಯನ್ನು ಭರ್ತಿ ಮಾಡಿದ ನಂತರ ಅಭ್ಯರ್ಥಿಯು submit button ನ್ನು ಒತ್ತಿದರೆ ಅರ್ಜಿ ಸಂಖ್ಯೆ (reference number) ಉತ್ಪಾದನೆಯಾಗುತ್ತದೆ. ಅನ್‌ಲೈನ್ ಅರ್ಜಿಯನ್ನು ಭರ್ತಿ ಮಾಡಿದ ನಂತರ ಅಭ್ಯರ್ಥಿಗಳು ಸ್ವೀಕೃತಿ ಪತ್ರ (acknowledgement slip) ಮತ್ತು ಚಲನ್‌ನ ದ್ವಿಪ್ರತಿಗಳನ್ನು ತೆಗೆದುಕೊಳ್ಳತಕ್ಕದ್ದು, ಈ ಚಲನ್ ಅನ್ನು ಅರ್ಜಿ ಶುಲ್ಕದೊಂದಿಗೆ **ಸ್ಟೇಟ್ ಬ್ಯಾಂಕ್ ಆಫ್ ಮೈಸೂರ್‌ನ** ಯಾವುದೇ ಶಾಖೆಯಲ್ಲಿ ಪಾವತಿಸಬಹುದು. ಪಾವತಿಸುವಾಗ ಚಲನ್‌ನಲ್ಲಿ ಅರ್ಜಿಯ ಸಂಖ್ಯೆ (reference number) ಮತ್ತು ಅಭ್ಯರ್ಥಿಯ ಹೆಸರು ಸರಿಯಾಗಿ ನಮೂದಾಗಿದೆಯೇ? ಎಂಬುದನ್ನು ಎಂದು ಅಭ್ಯರ್ಥಿಯು ಪರಿಶೀಲಿಸಿ ದೃಢಪಡಿಸಿಕೊಳ್ಳತಕ್ಕದ್ದು. ಅಭ್ಯರ್ಥಿಗಳು ಸ್ವೀಕೃತಿ ಪತ್ರವನ್ನು ಮತ್ತು ಚಲನ್‌ಪಾವತಿಯ ಒಂದು ಪ್ರತಿಯನ್ನು ಕಡ್ಡಾಯವಾಗಿ ತಮ್ಮ ಬಳಿ ಇರಿಸಿಕೊಳ್ಳತಕ್ಕದ್ದು. ಅರ್ಜಿ ಶುಲ್ಕದ ಜೊತೆಗೆ ಬ್ಯಾಂಕ್ ಸರ್ವೀಸ್ ಚಾರ್ಜ್‌ನ್ನು ಸಹಾ ಅಭ್ಯರ್ಥಿಗಳು ಬ್ಯಾಂಕ್‌ಗೆ ಪಾವತಿಸತಕ್ಕದ್ದು. ಈ ದಾಖಲೆಗಳನ್ನು ಅಭ್ಯರ್ಥಿಗಳ ಮೂಲ ದಾಖಲೆಗಳ ಪರಿಶೀಲನೆಗೆ ನಿಗದಿಪಡಿಸಿದ ದಿನಾಂಕದಂದು ಹಾಜರುಪಡಿಸತಕ್ಕದ್ದು.

**ಆನ್‌ಲೈನ್ ಮೂಲಕ ಶುಲ್ಕದೊಂದಿಗೆ ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ: 10-01-2014 ಆಗಿರುತ್ತದೆ.**

2. **ಅರ್ಜಿಶುಲ್ಕದ ವಿವರ:**

1. ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ, ಹಾಗೂ ಮಹಿಳಾ ಅಭ್ಯರ್ಥಿಗಳಿಗೆ ರೂ. **100/-** ಗಳು ಮಾತ್ರ
2. ಹಾಗೂ ಇತರರಿಗೆ ರೂ. **200/-** ಗಳು ಮಾತ್ರ.

ಶುಲ್ಕವನ್ನು ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕಕ್ಕೆ ಮುಂಚೆ ಪಾವತಿ ಮಾಡಿ, ಸದರಿ ವೆಬ್‌ಸೈಟ್‌ನಲ್ಲಿ ಶುಲ್ಕ ಪಾವತಿಸಿದ ಚಲನ್ ವಿವರಗಳನ್ನು ಅಪ್‌ಲೋಡ್ ಮಾಡಲು ತಿಳಿಸಿದೆ. ನಿಗದಿತ ಶುಲ್ಕ ಪಾವತಿಸದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

4. **ವಯೋಮಿತಿ :-**

ಅರ್ಜಿಗಳನ್ನು ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಯು

**ಅ) ಕನಿಷ್ಟ** 18 ವರ್ಷ ವಯಸ್ಸನ್ನು ಪೂರೈಸಿರತಕ್ಕದ್ದು.

**ಆ) ಗರಿಷ್ಟ ವಯೋಮಿತಿ ಈ ಕೆಳಕಂಡಂತಿರತಕ್ಕದ್ದು.**

| | | |
|---|---|---|
| **1** | ಸಾಮಾನ್ಯ ವರ್ಗ | 35 ವರ್ಷ |
| **2** | 2ಎ, 2ಬಿ, 3ಎ, 3ಬಿ | 38 ವರ್ಷ |
| **3** | ಪಜಾ/ ಪಪಂ/ ಪ್ರವರ್ಗ-1 | 40 ವರ್ಷ |
| **4** | ವಿಧವೆಯರು / ಅಂಗವಿಕಲರು | ಚಾಲ್ತಿಯಲ್ಲಿ ನಿಗದಿಪಡಿಸಿರುವ ವಯೋಮಿತಿಗೆ 10 ವರ್ಷ ಹೆಚ್ಚಿಗೆ ಸೇರಿಸಿಕೊಳ್ಳಲಾಗುವುದು. |
| **5** | ಮಾಜಿ ಸೈನಿಕರು | ಚಾಲ್ತಿಯಲ್ಲಿ ನಿಗದಿಪಡಿಸಿರುವ ವಯೋಮಿತಿಗೆ ಸಶಸ್ತ್ರದಳದಲ್ಲಿ ಎಷ್ಟು ವರ್ಷ ಸೇವೆ ಸಲ್ಲಿಸಿರುವವರೋ ಅದಕ್ಕೆ 3 ವರ್ಷಗಳನ್ನು ಸೇರಿಸಿದರೆ ಎಷ್ಟು ವರ್ಷಗಳಾಗುವುದೋ ಅಷ್ಟು ವರ್ಷ |

ಎಸ್.ಎಸ್.ಎಲ್.ಸಿ. ಅಂಕಪಟ್ಟಿ ಅಥವಾ ತತ್ಸಮಾನ ವಿದ್ಯಾರ್ಹತೆಯ ಪ್ರಮಾಣ ಪತ್ರದಲ್ಲಿ ನಮೂದಿಸಿರುವಂತೆ ಜನ್ಮ ದಿನಾಂಕವನ್ನು ಪರಿಗಣಿಸಲಾಗುವುದು. ಇತರೆ ಯಾವುದೇ ದಾಖಲೆಗಳನ್ನು ಪರಿಗಣಿಸಲಾಗುವುದಿಲ್ಲ.

ಕರ್ನಾಟಕ ಸರ್ಕಾರಿ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977 ರ ನಿಯಮ 6 ರಂತೆ ಗರಿಷ್ಟ ವಯೋಮಿತಿಯನ್ನು ಈ ಮುಂದಿನ ಪ್ರಕರಣಗಳಲ್ಲಿ ಹೇಳಿರುವಷ್ಟರ ಮಟ್ಟಿಗೆ ಹೆಚ್ಚಿಸಲು ಅವಕಾಶವಿದೆ.

ಎ) ಸರ್ಕಾರ ಅಥವಾ ಸ್ಥಳೀಯ ಪ್ರಾಧಿಕಾರ ಅಥವಾ ರಾಜ್ಯ ಅಧಿನಿಯಮ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪಿಸಲಾದ ಅಥವಾ ರಾಜ್ಯ ಅಧಿನಿಯಮದ ಅಥವಾ ಕೇಂದ್ರ ಅಧಿನಿಯಮದ ಅಡಿಯಲ್ಲಿ ಸರ್ಕಾರದಿಂದ ಸ್ಥಾಪಿತವಾಗಿದ್ದು ಮತ್ತು ಸರ್ಕಾರವು ಒಡೆತನ ಹೊಂದಿರುವ ಅಥವಾ ನಿಯಂತ್ರಣ ಹೊಂದಿರುವ ನಿಗಮದ ಅಡಿಯಲ್ಲಿ ಹುದ್ದೆಯನ್ನು ಧಾರಣ ಮಾಡಿರುವ ಅಥವಾ ಧಾರಣ ಮಾಡಿದ ಅಭ್ಯರ್ಥಿಯ ಸಂದರ್ಭದಲ್ಲಿ ಆತ ಅಂಥ ಹುದ್ದೆಯನ್ನು ಧಾರಣೆ ಮಾಡಿರುವಷ್ಟು ಅಥವಾ ಧಾರಣೆ ಮಾಡಿದಷ್ಟು ಅಥವಾ (ಹತ್ತು) ವರ್ಷಗಳು ಇವುಗಳಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳು.

ಬಿ) ಈ ರಾಜ್ಯದಲ್ಲಿರುವ ಭಾರತ ಸರ್ಕಾರ ಜನಗಣತಿ ಸಂಸ್ಥೆಯಲ್ಲಿ ಹುದ್ದೆಯನ್ನು ಧಾರಣೆ ಮಾಡಿರುವ ಅಥವಾ ಧಾರಣ ಮಾಡಿದ್ದ ಅಭ್ಯರ್ಥಿಯ ಸಂದರ್ಭದಲ್ಲಿ ಅಂಥ ಹುದ್ದೆಯನ್ನು ಆತನು ಧಾರಣೆ ಮಾಡಿರುವಷ್ಟು ಅಥವಾ ಧಾರಣೆ ಮಾಡಿದಷ್ಟು ವರ್ಷಗಳು ಅಥವಾ ಐದು ವರ್ಷಗಳು ಇವುಗಳಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳು.

ಸಿ) ಜೀತ ಕಾರ್ಮಿಕವಾಗಿದ್ದ ಅಭ್ಯರ್ಥಿಯ ಸಂದರ್ಭದಲ್ಲಿ ಹತ್ತು ವರ್ಷಗಳು.

**ಡಿ) ಮಾಜಿ ಸೈನಿಕ:** ಅಭ್ಯರ್ಥಿಯು ಮಾಜಿ ಸೈನಿಕನಾಗಿದ್ದಲ್ಲಿ ಸಶಸ್ತ್ರದಳದಲ್ಲಿ ಎಷ್ಟು ವರ್ಷ ಸೇವೆ ಸಲ್ಲಿಸಿರುವನೋ ಆ ವರ್ಷಗಳಿಗೆ ಮೂರು ವರ್ಷಗಳನ್ನು ಸೇರಿಸಿದರೆ ಎಷ್ಟು ವರ್ಷಗಳಾಗುವುದೋ ಅಷ್ಟು ವರ್ಷಗಳು.

**ವಿವರಣೆ**: (ಎ) ಮಾಜಿ ಸೈನಿಕ ಎಂದರೆ ಕೇಂದ್ರದ ನಿಯತ ಸೇನೆಯಲ್ಲಿ ನೌಕಾಪಡೆಯಲ್ಲಿ ಮತ್ತು ವಾಯುಪಡೆಯಲ್ಲಿ ಯಾವುದೇ ದರ್ಜೆಯಲ್ಲಿ (ಯೋದನಾಗಿ ಅಥವಾ ಯೋಧನಾಗಿಲ್ಲದೆ) ಸೇವೆ ಸಲ್ಲಿಸಿರುವ ವ್ಯಕ್ತಿ ಎಂದು ಅರ್ಥ, ಇದು ರಕ್ಷಣಾ ಭದ್ರತಾ ದಳ, ಸಾಮಾನ್ಯ ಮೀಸಲು ಇಂಜಿನಿಯರಿಂಗ್ ಪಡೆ, ಲೋಕಸಹಾಯಕ ಸೇನಾ ಮತ್ತು ಅರೆ ಮಿಲಿಟರಿ ಪಡೆಯಲ್ಲಿ ಸೇವೆ ಸಲ್ಲಿಸಿರುವ ವ್ಯಕ್ತಿಯನ್ನು ಮತ್ತು

**ಅ)** ನಿವೃತ್ತಿ ವೇತನವನ್ನು ಗಳಿಸಿದ ತರುವಾಯ ಅಂಥ ಸೇವೆಯಿಂದ ನಿವೃತ್ತನಾಗುವ ವ್ಯಕ್ತಿಯನ್ನು ಅಥವಾ

**ಆ)** ಸೈನಿಕ ಸೇವೆಯಿಂದ ಉಂಟಾದ ವೈದ್ಯಕೀಯ ಕಾರಣಗಳು ಅಥವಾ ಆತನ ನಿಯಂತ್ರಣ ಮೀರಿದ ಪರಿಸ್ಥಿತಿಗಳ ಮೇಲೆ ಅಂಥ ಸೇವೆಯಿಂದ ಬಿಡುಗಡೆ ಮಾಡಿರುವ ಮತ್ತು ವೈದ್ಯಕೀಯ ಅಥವಾ ಇತರ ಅಸಮರ್ಥನಾ ನಿವೃತ್ತಿ ವೇತನವನ್ನು ನೀಡಲಾಗಿರುವ ವ್ಯಕ್ತಿಯನ್ನು ಅಥವಾ

**ಇ)** ಆತನ ವೈಯಕ್ತಿಕ ಕೋರಿಕೆಯ ಮೇಲಲ್ಲದೆ ಸಿಬ್ಬಂದಿ ಸಂಖ್ಯೆಯ ಕಡಿತದ ಪ್ರತಿಫಲವಾಗಿ ಅಂಥ ಸೇವೆಯಿಂದ ಆತನನ್ನು ಬಿಡುಗಡೆಗೊಳಿಸಿರುವ ವ್ಯಕ್ತಿಯನ್ನು ಅಥವಾ

**ಈ)** ಆತನ ವೈಯಕ್ತಿಕ ಕೋರಿಕೆ ಮೇಲಲ್ಲದೆ ಅಥವಾ ದುರ್ವರ್ತನೆ ಅಥವಾ ಅದಕ್ಷತೆಯ ಕಾರಣದಿಂದ ವಜಾಗೊಳಿಸುವ ಅಥವಾ ತೆಗೆದುಹಾಕುವ ಮೂಲಕವಲ್ಲದೆ ಅನ್ಯಾಥಾ ನಿಯೋಜಿಸಲಾದ ನಿರ್ದಿಷ್ಟ ಅವಧಿ ಮುಕ್ತಾಯವಾದ ತರುವಾಯ ಅಂಥ ಸೇವೆಯಿಂದ ಬಿಡುಗಡೆಗೊಳಿಸಿರುವ ಮತ್ತು ಉಪದಾನ ನೀಡಿರುವ ವ್ಯಕ್ತಿಯನ್ನು

**– ಒಳಗೊಳ್ಳುವುದಿಲ್ಲ.**

**ಆದರೆ** ಪ್ರಾದೇಶಿಕ ಸೇನೆಯ ಮುಂದಿನ ಪ್ರವರ್ಗಗಳ ಸಿಬ್ಬಂದಿಯನ್ನು ಎಂದರೆ

**(i).** ನಿರಂತರ ಸೇವೆ ಸಲ್ಲಿಸಿ ನಿವೃತ್ತಿ ಹೊಂದಿದ ಪಿಂಚಣಿದಾರರು

**(ii).** ಸೈನಿಕ ಸೇವೆಯ ಕಾರಣದಿಂದ ಅಂಗವಿಕಲರಾದ ವ್ಯಕ್ತಿಗಳನ್ನು ಮತ್ತು

**(iii)..** ಶೌರ್ಯ ಪ್ರಶಸ್ತಿ ವಿಜೇತರನ್ನು – ಒಳಗೊಳ್ಳುತ್ತದೆ.

**ವಿವರಣೆ** ಕೇಂದ್ರ ಸಶಸ್ತ್ರದಳದ ಸೇವೆಯಲ್ಲಿ ವ್ಯಕ್ತಿಗಳು ಸೇವೆಯಿಂದ ನಿವೃತ್ತಿಹೊಂದಿದ ನಂತರ ಮಾಜಿ ಸೈನಿಕರ ವರ್ಗದಡಿ ಬರುವ ವ್ಯಕ್ತಿಗೆ ಒಪ್ಪಂದವು ಪೂರ್ಣವಾಗಲು ಒಂದು ವರ್ಷಕ್ಕೆ ಮುನ್ನ ಉದ್ಯೋಗಕ್ಕೆ ಅರ್ಜಿ ಹಾಕಿಕೊಳ್ಳಲು ಹಾಗೂ ಅವರಿಗೆ ಮಾಜಿ ಸೈನಿಕರಿಗೆ ದೊರೆಯುವ ಎಲ್ಲಾ ಸೌಲಭ್ಯಗಳನ್ನು ಹೊಂದಲು ಅನುಮತಿ ನೀಡಲಾಗಿದೆ. ಆದರೆ, ಸಮವಸ್ತ್ರವನ್ನು ತ್ಯಜಿಸಲು ಅನುಮತಿ ನೀಡುವವರೆಗೆ ರಾಜ್ಯ ನಾಗರೀಕ ಸೇವೆ ಅಥವಾ ಹುದ್ದೆಗಳಿಗೆ ನೇಮಕ ಹೊಂದುವಂತಿಲ್ಲ.

**5. ಜಾತಿ ಮೀಸಲಾತಿ ಪ್ರಮಾಣಪತ್ರಗಳು:–**

ಜಾತಿ ಮೀಸಲಾತಿ ಕೋರಬಯಸುವ ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ ಅಭ್ಯರ್ಥಿಗಳು ನಮೂನೆ 'ಡಿ' ನಲ್ಲಿ, ಪ್ರವರ್ಗ–1 ರ ಅಭ್ಯರ್ಥಿಗಳು ನಮೂನೆ 'ಇ' ನಲ್ಲಿ ಹಾಗೂ 2ಎ, 2ಬಿ, 3ಎ, 3ಬಿ ಅಭ್ಯರ್ಥಿಗಳು ನಮೂನೆ 'ಎಫ್' ನಲ್ಲಿ ಸಂಬಂಧಿತ ತಹಸೀಲ್ದಾರ್ ರವರಿಂದ ಪ್ರಮಾಣಪತ್ರವನ್ನು ಪಡೆದಿರಬೇಕು. ಈ ಪ್ರಮಾಣಪತ್ರವು ಈ ಹುದ್ದೆಗೆ ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದೊಳಗೆ ಪಡೆದಿರಬೇಕು ಹಾಗೂ ಚಾಲ್ತಿಯಲ್ಲಿರಬೇಕು ನಂತರ ಪಡೆದ ಪ್ರಮಾಣಪತ್ರಗಳನ್ನು ಪರಿಗಣಿಸುವುದಿಲ್ಲ.

**6. ಗ್ರಾಮೀಣ ಅಭ್ಯರ್ಥಿಗಳು:**

ಗ್ರಾಮೀಣ ಅಭ್ಯರ್ಥಿ ಎಂದರೆ ಒಂದು ಹುದ್ದೆಗಾಗಿ ನಿಗಧಿಪಡಿಸಲಾದ ಅರ್ಹತಾ ಪರೀಕ್ಷೆಯು ಎಸ್.ಎಸ್.ಎಲ್.ಸಿ. ಅಥವಾ ಉನ್ನತ ಪರೀಕ್ಷೆಯಾಗಿದ್ದಲ್ಲಿ 1ನೇ ತರಗತಿಯಿಂದ 10 ನೇ ತರಗತಿಯವರೆಗೆ ಗ್ರಾಮಾಂತರ ಪ್ರದೇಶಗಳಲ್ಲಿ ವ್ಯಾಸಂಗ ಮಾಡಿದ ಬಗ್ಗೆ ವ್ಯಾಸಂಗದ ಪ್ರಮಾಣಪತ್ರವನ್ನು ಸಂಬಂಧಪಟ್ಟ ಪ್ರಾಧಿಕಾರದಿಂದ ಪಡೆದುಕೊಂಡಿರಬೇಕು. ಗ್ರಾಮೀಣ ಮೀಸಲಾತಿಗೆ ಒಳಪಡುವ ಪ್ರದೇಶಗಳಲ್ಲಿ ವ್ಯಾಸಂಗ ಮಾಡಿ ಉತ್ತೀರ್ಣರಾಗಿರುವವರು ಈ ಮೀಸಲಾತಿ ಪಡೆಯಲು ಅರ್ಹರು. **ಗ್ರಾಮೀಣ ಅಭ್ಯರ್ಥಿಗಳಿಗೆಂದು ಮೀಸಲಿರಿಸಿದ ಹುದ್ದೆಗಳನ್ನು ಕ್ಲೇಮ್ ಮಾಡುವ ಸಾಮಾನ್ಯ ಅರ್ಹತೆಯ ಅಭ್ಯರ್ಥಿಗಳು ನಮೂನೆ–2 ರ ಪ್ರಮಾಣ ಪತ್ರವಲ್ಲದೆ ಮೇಲುಸ್ತರಕ್ಕೆ ಸೇರಿಲ್ಲದಿರುವ ಬಗ್ಗೆ ನಮೂನೆ–1 ರಲ್ಲಿ ಪ್ರಮಾಣ ಪತ್ರವನ್ನು ಕಡ್ಡಾಯವಾಗಿ** ಸಂಬಂಧಿಸಿದ ತಾಲ್ಲೂಕು ತಹಸೀಲ್ದಾರ್ ರವರಿಂದ ಪಡೆದುಕೊಂಡಿರಬೇಕು.

ಅಂತೆಯೇ ಗ್ರಾಮೀಣ ಮೀಸಲಾತಿ ಕೋರುವ ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ, ಪ್ರವರ್ಗ–1, ಪವರ್ಗ–2ಎ, 2ಬಿ, 3ಎ, 3ಬಿ ಮೀಸಲಾತಿಗೆ ಸೇರಿದ ಅಭ್ಯರ್ಥಿಗಳು ಕಡ್ಡಾಯವಾಗಿ ಗ್ರಾಮೀಣ ಮೀಸಲಾತಿಯ ಪ್ರಮಾನ ಪತ್ರವನ್ನು ನಮೂನೆ–2 ರಲ್ಲಿ ನಿಗದಿತ ಪ್ರಾಧಿಕಾರದಿಂದ ಪಡೆದು, ಕ್ಷೇತ್ರ ಶಿಕ್ಷಣಾಧಿಕಾರಿಯವರಿಂದ ಮೇಲು ರುಜು ಮತ್ತು ಮೊಹರು ಮಾಡಿಸಿಕೊಡು ಮೂಲ ದಾಖಲೆಗಳ ಪರಿಶೀಲನಾ ಸಮಯದಲ್ಲಿ ಸಲ್ಲಿಸಬೇಕು.

**7. ಮಾಜಿ ಸೈನಿಕರ ಕುಟುಂಬದ ಅಭ್ಯರ್ಥಿಗಳು :**

ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977 ರ ನಿಯಮ 9(1) ರ ರನ್ವಯ ಮಾಜಿ ಸೈನಿಕರು ಎನ್ನುವ ಬಗ್ಗೆ ಅಥವಾ ಭಾರತ ದೇಶದ ಒಕ್ಕೂಟದ ಸಶಸ್ತ್ರ ದಳದಲ್ಲಿ ಸೇವೆ ಸಲ್ಲಿಸುತ್ತಿರುವಾಗ ಕೊಲ್ಲಲ್ಪಟ್ಟ ಅಥವಾ ಶಾಶ್ವತವಾಗಿ ಅಂಗಹೀನರಾದ ವ್ಯಕ್ತಿಗಳ ಕುಟುಂಬದ ಸದಸ್ಯರು ಎಂಬ ಬಗ್ಗೆ ಸಕ್ಷಮ ಮಿಲಿಟರಿ ಅಧಿಕಾರಿಗಳಿಂದ/ ಸಕ್ಷಮ ಪ್ರಾಧಿಕಾರದಿಂದ ಪ್ರಮಾಣ ಪತ್ರವನ್ನು ಪಡೆದಿರಬೇಕು. ಉಪನಿಯಮದಡಿ ಕುಟುಂಬದ ಸದಸ್ಯರು ಎಂದರೆ ಪತ್ನಿ ಅಥವಾ ಪತಿ ಮತ್ತು ಪೂರ್ಣ ಅವಲಂಬಿತ ಮಕ್ಕಳು ಮತ್ತು ಮಲಮಕ್ಕಳು.

**8. ಅಂಗವಿಕಲ ಅಭ್ಯರ್ಥಿಗಳು :**

ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977 ರ ನಿಯಮ 9(1–ಎ) ರ ಅನ್ವಯ ರಾಜ್ಯ ಸಿವಿಲ್ ಸೇವೆಯಲ್ಲಿನ ಗ್ರೂಪ್ ಸಿ ಹುದ್ದೆಗಳ ನೇರನೇಮಕಾತಿಯಲ್ಲಿ ಅಂಗವಿಕಲರಿಗೆ ಶೇ. 5 ರಷ್ಟು ಸಮತಳ ಮೀಸಲಾತಿ ಕಲ್ಪಿಸಲಾಗಿದೆ.

ಸರ್ಕಾರದ ಆದೇಶ ಸಂಖ್ಯೆ ಸಿಆಸುಇ. 128 ಸೆನೆನಿ 2006 ದಿ: 1/8/09 ರಂತೆ ಮೀಸಲಾತಿ ನೀಡಲಾಗುವುದು. ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ ಸಿಆಸುಎ. 115. ಸೆನೆನಿ. 2005, ದಿನಾಂಕ 19/11/2005 ರಲ್ಲಿ ನಿಗದಿಪಡಿಸಿರುವ ನಮೂನೆಯಲ್ಲಿ ಅಂಗವಿಕಲತೆಯ ಬಗ್ಗೆ ಸಂಬಂಧಪಟ್ಟ ಜಿಲ್ಲಾ ಮಟ್ಟದ ವೈದ್ಯಕೀಯ ಮಂಡಳಿಯು ನೀಡುವ ಮೂಲ ಪ್ರಮಾಣಪತ್ರವನ್ನು ಹಾಗೂ ದೃಢೀಕೃತ ಪ್ರತಿಯನ್ನು ಮೂಲ ದಾಖಲಾತಿ ಪರಿಶೀಲನಾ ಸಮಯದಲ್ಲಿ ಸಲ್ಲಿಸಬೇಕು. ಬೇರೆ ಯಾವುದೇ ನಮೂನೆಗಳಲ್ಲಿ ಪಡೆಯಲಾಗಿರುವ ಪ್ರಮಾಣಪತ್ರಗಳನ್ನು ಪರಿಗಣಿಸಲಾಗುವುದಿಲ್ಲ.

ಸರ್ಕಾರದ ಅಧಿಸೂಚನೆ ಸಂಖ್ಯೆ ಡಿಪಿಎಆರ್ 52 ಎಸ್ಆರ್ಆರ್ 99, ದಿನಾಂಕ 29/11/2002 ಮತ್ತು ತಿದ್ದುಪಡಿ ಅಧಿಸೂಚನೆ ಸಂಖ್ಯೆ ಡಿಪಿಎಆರ್ 54 ಎಸ್ಆರ್ಆರ್ 2012, ದಿನಾಂಕ 23/6/2012 ರ ರೀತ್ಯಾ ಗ್ರಾಮಲೆಕ್ಕಿಗರ ಹುದ್ದೆಗಳಿಗೆ ನಿಗದಿತ ಪ್ರಮಾಣದ ಅಂಗವೈಕಲ್ಯವುಳ್ಳ ಅಂಗವಿಕಲರ ಮೀಸಲಾತಿಯನ್ನು ಈ ಕೆಳಕಂಡ ವರ್ಗಗಳಿಗೆ ಮಾತ್ರ ಪರಿಗಣಿಸಲಾಗುವುದು.

1. ಶ್ರವಣ ದೋಷವುಳ್ಳವರು (Hearing Impaired)
2. ದೈಹಿಕ ಅಂಗವಿಕಲರು (Locomotor disability) ಚಲನವಲನ ವೈಕಲ್ಯತೆ ಇರುವವರು
3. ಕುಷ್ಟರೋಗದಿಂದ ಗುಣಮುಖರಾದವರು (Leprosy Cured) / ಬುದ್ಧಿಮಾಂದ್ಯತೆ / ಮಾನಸಿಕ ಅಸ್ವಸ್ಥತೆ ಹೊಂದಿರುವವರಿಗೆ

**9. ಕನ್ನಡ ಮಾಧ್ಯಮ ಅಭ್ಯರ್ಥಿಗಳು:**

ಸರ್ಕಾರದ ಅಧಿಸೂಚನೆ ಸಂ. ಡಿಪಿಎಆರ್ 71 ಎಸ್ಆರ್ಆರ್ 2001 ದಿನಾಂಕ 24–10–2002 ರಲ್ಲಿ ಹೊರಡಿಸಿದ ಕರ್ನಾಟಕ ಸರ್ಕಾರಿ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977 ರ ನಿಯಮ 9(1)(ಸಿ) ರನ್ವಯ ಅಭ್ಯರ್ಥಿಯ 1 ರಿಂದ 10 ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರುತ್ತಾರೆ ಎನ್ನುವ ಬಗ್ಗೆ ಸಂಬಂಧಪಟ್ಟ ಶಾಲೆಯ ಮುಖ್ಯೋಪಾದ್ಯಾಯರ ಸಹಿ ಹಾಗೂ ಮೊಹರು ಪಡೆದ ಪ್ರಮಾಣ ಪತ್ರವನ್ನು ಸಂಬಂಧಪಟ್ಟ ಕ್ಷೇತ್ರಶಿಕ್ಷಣಾಧಿಕಾರಿಗಳಿಂದ ಮೇಲು ರುಜು ಮಾಡಿಸಿ ದೃಢೀಕೃತ ಪ್ರತಿಯನ್ನು ಮೂಲ ದಾಖಲಾತಿ ಪರಿಶೀಲನಾ ಸಮಯದಲ್ಲಿ ಸಲ್ಲಿಸಬೇಕು.

**10. ಯೋಜನಾ ನಿರಾಶ್ರಿತರಾದ ಕುಟುಂಬದ ಅಭ್ಯರ್ಥಿಗಳು :**

ಕರ್ನಾಟಕ ಸರ್ಕಾರಿ ಆದೇಶ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳೂ 1977 ರ ನಿಯಮ 9(1ಎಎ) ರನ್ವಯ ಯೋಜನೆಗಳಿಂದ ನಿರಾಶ್ರಿತರಾದ ಕುಟುಂಬದ ಅಭ್ಯರ್ಥಿಗಳಿಗೆ ಮೀಸಲಿರಿಸಿದ ಹುದ್ದೆಗಳನ್ನು ಕೋರುವ ಅಭ್ಯರ್ಥಿಗಳು ಸಂಬಂಧಿಸಿದ ತಹಸೀಲ್ದಾರ್ ರವರಿಂದ ಸರ್ಕಾರದ ಅಧಿಸೂಚನೆ ಸಂಖ್ಯೆ ಡಿಪಿಎಆರ್ 23 ಎಸ್ಆರ್ಆರ್ 99 ದಿನಾಂಕ 23/11/2000 ರನ್ವಯ ಹಾಗೂ ಸರ್ಕಾರದ ಆದೇಶದ ಸಂಖ್ಯೆ ಸಿಆಸುಇ. 44 ಸೆನೆನಿ 2001 ದಿನಾಂಕ 27/07/2001 ರಲ್ಲಿ ತಿಳಿಸಿರುವಂತೆ ನಿಗದಿತ ನಮೂನೆಯಲ್ಲಿ ದೃಢೀಕರಣ ಪತ್ರ ಪಡೆದುಕೊಂಡಿರಬೇಕು.

**11. ಅರ್ಹತಾ ಷರತ್ತುಗಳು :**

(ಅ) ಅರ್ಜಿದಾರರು ಭಾರತೀಯ ನಾಗರೀಕನಾಗಿರತಕ್ಕದ್ದು.

(ಆ) ಅಭ್ಯರ್ಥಿಯು ಮಾನಸಿಕವಾಗಿ ಮತ್ತು ದೈಹಿಕವಾಗಿ ಆರೋಗ್ಯವಂತನಾಗಿರಬೇಕು ಮತ್ತು ಅವರ ನೇಮಕಾತಿಯ ಕರ್ತವ್ಯಗಳ ದಕ್ಷ ನಿರ್ವಹಣೆಗೆ ಆತಂಕವನ್ನುಂಟು ಮಾಡುವ ಸಂಭವವಿರುವ ಯಾವುದೇ ದೈಹಿಕ ನ್ಯೂನತೆಯಿಂದ ಮುಕ್ತರಾಗಿರಬೇಕು.

(ಇ) ದೈಹಿಕವಾಗಿ/ಮಾನಸಿಕವಾಗಿ ಅನರ್ಹರಾಗಿದ್ದಾರೆಂಬುದಾಗಿ ವೈದ್ಯಕೀಯ ಮಂಡಳಿಯು ವರದಿ ನೀಡಿದಲ್ಲಿ ಅಭ್ಯರ್ಥಿಯು ಹುದ್ದೆಗೆ ಅನರ್ಹರೆಂಬುದಾಗಿ ತಿರಸ್ಕರಿಸುವ ಪೂರ್ಣ ವಿವೇಚನೆಯನ್ನು ರಾಜ್ಯ ಸರ್ಕಾರವು ಕಾಯ್ದಿರಿಸಿಕೊಂಡಿದೆ ಮತ್ತು ಸರ್ಕಾರದ ವಿವೇಚನೆಯು ಯಾವುದೇ ವಿಧದಲ್ಲೂ ಈ ನಿಯಮಗಳ ಮೂಲಕ ಸೀಮಿತವಾಗಿರುವುದಿಲ್ಲ.

**12. ಪ್ರಮುಖವಾದ ಸೂಚನೆಗಳು.**

ಅಭ್ಯರ್ಥಿಗಳು ಕೆಳಕಂಡ ಪ್ರಮಾಣಪತ್ರಗಳನ್ನು ಸಕ್ಷಮ ಪ್ರಾಧಿಕಾರದಿಂದ ಪಡೆದು ಮೂಲ ದಾಖಲಾತಿ ಪರಿಶೀಲನಾ ಸಮಯದಲ್ಲಿ ಸಲ್ಲಿಸಬೇಕು.

- ಹುದ್ದೆಗೆ ನಿಗದಿಪಡಿಸಲಾದ ವಿದ್ಯಾರ್ಹತೆಯ ಅಂಕಪಟ್ಟಿ, ಪ್ರಮಾಣ ಪತ್ರ (ಕಂಪ್ಯೂಟರ್ ಜ್ಞಾನದ ಬಗ್ಗೆ ದಾಖಲೆ ಇದ್ದಲ್ಲಿ ಸಲ್ಲಿಸತಕ್ಕದ್ದು).
- ಜನ್ಮ ದಿನಾಂಕವನ್ನು ನಮೂದಿಸಿರುವ ಎಸ್.ಎಸ್.ಎಲ್.ಸಿ ಅಂಕಪಟ್ಟಿ ಇನ್ನಿತರೆ ಶಾಲಾ ದಾಖಲೆಗಳ ಅಧೀಕೃತ ಪ್ರಮಾಣ ಪತ್ರ
- ಸೈನಿಕ ಸೇವೆಯಿಂದ ಬಿಡುಗಡೆಯಾದ / ಮುಕ್ತಿಹೊಂದಿದ ಬಗ್ಗೆ ಹಾಗೂ ಅವರು ಸಾಮಾನ್ಯ ನೇಮಕಾತಿ ನಿಯಮಗಳನ್ವಯ ಮಾಜಿ ಸೈನಿಕ ಎಂಬ ವ್ಯಾಖ್ಯೆಯಡಿ ಬರುತ್ತಾರೆಂಬ ಬಗ್ಗೆ ಸಕ್ಷಮ ಪ್ರಾಧಿಕಾರ ನೀಡಿರುವ ಪ್ರಮಾಣ ಪತ್ರ (ಮೀಸಲಾತಿ ಕೋರಿದ್ದಲ್ಲಿ)

  ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ, ಪ್ರವರ್ಗ–1, ಪವರ್ಗ–2, 2ಎ, 2ಬಿ, 3ಎ,3ಬಿ ಮೀಸಲಾತಿಯ ಪ್ರಮಾಣ ಪತ್ರಗಳು (ಮೀಸಲಾತಿ ಕೋರಿದ್ದಲ್ಲಿ)
- ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರ ನಮೂನೆ–1 ಮತ್ತು 2 ರಲ್ಲಿ (ಮೀಸಲಾತಿ ಕೋರಿದ್ದಲ್ಲಿ)
- ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಪ್ರಮಾಣ ಪತ್ರ (ಮೀಸಲಾತಿ ಕೋರಿದ್ದಲ್ಲಿ)
- ಯೋಜನೆಗಳಿಂದ ನಿರಾಶ್ರಿತರಾದ ಬಗ್ಗೆ ಪ್ರಮಾಣ ಪತ್ರ (ಮೀಸಲಾತಿ ಕೋರಿದ್ದಲ್ಲಿ)
- ವಿಧವೆಯಾಗಿದ್ದಲ್ಲಿ ಸಕ್ಷಮ ಪ್ರಾಧಿಕಾರದಿಂದ ಪಡೆದ ಪ್ರಮಾಣ ಪತ್ರ.
- ಅಂಗವಿಕಲ ಮೀಸಲಾತಿ ಪ್ರಮಾಣ ಪತ್ರ. (ಮೀಸಲಾತಿ ಕೋರಿದ್ದಲ್ಲಿ)

**13. ದುರ್ನಡತೆ:**

ಒಬ್ಬ ಅಭ್ಯರ್ಥಿಯು ನಕಲಿ ವ್ಯಕ್ತಿಯಾಗಿರುವನೆಂದು ಅಥವಾ ಖೋಟಾ ದಸ್ತಾವೇಜು ಅಥವಾ ತಿದ್ದಲಾದ ದಸ್ತಾವೇಜುಗಳನ್ನು ಸಲ್ಲಿಸಿರುವನೆಂದು ಅಥವಾ ತಪ್ಪು ಅಥವಾ ಸುಳ್ಳು ಹೇಳಿಕೆ ನೀಡಿರುವನೆಂದು ಅಥವಾ ವಾಸ್ತವಿಕ ಮಾಹಿತಿಯನ್ನು ಮರೆಮಾಚಿರುವನೆಂದು ಅಥವಾ ಅವರ ನೇಮಕಾತಿಯ ಸಂಬಂಧದಲ್ಲಿ ಯಾವುದೇ ಇತರ ಅಕ್ರಮ ಮತ್ತು ಅನುಚಿತ ಮಾರ್ಗವನ್ನು ಅನುಸರಿಸಿರುವುದು ಕಂಡು ಬಂದಲ್ಲಿ ಅವನು / ಅವಳು ಸ್ವತ: ಕ್ರಿಮಿನಲ್ ವ್ಯವಹರಣೆಗಳಿಗೆ ಮತ್ತು ಶಿಸ್ತು ಕ್ರಮಕ್ಕೆ ಒಳಪಡುವುದಲ್ಲದೆ, ಹುದ್ದೆಯ ಆಯ್ಕೆಯಿಂದ ಅಭ್ಯರ್ಥಿತ್ವವನ್ನು ರದ್ದುಪಡಿಸಲಾಗುವುದು.

**14. ಇತರೆ ಸೂಚನೆಗಳು :**

1. ಅಭ್ಯರ್ಥಿಗಳಿಗೆ ಕನ್ನಡ ಬಾಷಾ ಜ್ಞಾನದ ಅರಿವು ಅವಶ್ಯಕತೆ ಕಡ್ಡಾಯವಾಗಿರುತ್ತದೆ.
2. ನೇಮಕಾತಿ ಪ್ರಕ್ರಿಯೆ ಪೂರ್ಣಗೊಳ್ಳುವ ಮುನ್ನ ಯಾವುದೇ ಸಂದರ್ಭದಲ್ಲಿ ಹುದ್ದೆಗಳ ಸಂಖ್ಯೆಯನ್ನು ಹೆಚ್ಚು ಮಾಡುವ /ಕಡಿತಗೊಳಿಸುವ ಅಥವಾ ನಿಯಮಾನುಸಾರ ಅಗತ್ಯವಾದ ಯಾವುದೇ ಹೆಚ್ಚುವರಿ ಷರತ್ತುಗಳನ್ನು ವಿಧಿಸುವ ಅಥವಾ ಸಡಿಲಗೊಳಿಸುವ ಅಧಿಕಾರ ಹಾಗೂ ಯಾವುದೇ ಕಾರಣ ನೀಡದೆ ನೇಮಕಾತಿ ಪ್ರಕ್ರಿಯೆಯನ್ನು ರದ್ದುಪಡಿಸುವ ಅಧಿಕಾರವನ್ನು ಜಿಲ್ಲಾಧಿಕಾರಿಗಳು, ಕೋಲಾರ ಜಿಲ್ಲೆ ರವರು ಕಾಯ್ದಿರಿಸಿಕೊಂಡಿರುತ್ತಾರೆ.
3. ಸರ್ಕಾರಿ ಇಲಾಖೆಯಲ್ಲಿ / ಸರ್ಕಾರಿಯೇತರ ಇಲಾಖೆಗಳಲ್ಲಿ ಸೇವೆ ಸಲ್ಲಿಸುತ್ತಿರುವ ಅಭ್ಯರ್ಥಿಗಳು ಅರ್ಜಿಯನ್ನು ಇಲಾಖಾ ಮುಖ್ಯಸ್ಥರ ಅನುಮತಿ ಪಡೆದು ಸಲ್ಲಿಸುವುದು.
4. ಮೀಸಲಾತಿಯಡಿಯಲ್ಲಿ ಆಯ್ಕೆಯಾದ ಅಭ್ಯರ್ಥಿಗಳು ಹಾಜರುಪಡಿಸುವ ಎಲ್ಲಾ ಪ್ರಮಾಣ ಪತ್ರಗಳನ್ನು ಸಕ್ಷಮ ಪ್ರಾಧಿಕಾರದಿಂದ ಪರಿಶೀಲನೆಗೊಳಪಡಿಸಿ ಅದರ ಸಿಂಧುತ್ವದ ಬಗ್ಗೆ ದೃಢೀಪಡಿಸಿಕೊಂಡ ನಂತರವೇ ನೇಮಕಾತಿ ಆದೇಶ ನೀಡಲಾಗುವುದು.
5. ಕಾಲೇಜಿನ ಪ್ರಾಂಶುಪಾಲರಿಂದ ಪಡೆದ ಒಂದು ನಡತೆ ಪ್ರಮಾಣಪತ್ರ ಹಾಗೂ ಸ್ಥಳೀಯ ಇಬ್ಬರು ಗಣ್ಯವ್ಯಕ್ತಿಗಳಿಂದ ಪಡೆದ 6 ತಿಂಗಳೊಳಗಿನ ಇತ್ತೀಚಿನ ನಡತೆ ಪ್ರಮಾಣಪತ್ರ ಲಗತ್ತಿಸಬೇಕು.
6. ಅಭ್ಯರ್ಥಿಗಳು ಆನ್‌ಲೈನ್‌ನಲ್ಲಿ ಪಡೆದ acknowledgement ಹಾಗೂ CHALLAN slip ನ್ನು ಬ್ಯಾಂಕ್‌ನಲ್ಲಿ ಪಾವತಿಸಿದ ನಂತರ ಅಭ್ಯರ್ಥಿಯ ಪ್ರತಿಯನ್ನು ಮಡಚುವುದಾಗಲೀ, ಹರಿಯುವುದಾಗಲೀ ಮಾಡದೇ ಹಾಳಾಗದಂತೆ ಎಚ್ಚರವಹಿಸತಕ್ಕದ್ದು.
7. ಸೇವೆಯಲ್ಲಿರುವ ಅಭ್ಯರ್ಥಿಗಳು ಅವರ ನೇಮಕಾತಿ ಪ್ರಾಧಿಕಾರದಿಂದ ನಿರಾಕ್ಷೇಪಣ ಪತ್ರವನ್ನು (No OBJECTION CERTIFICATE) ಪಡೆದು ಮೂಲ ದಾಖಲಾತಿಗಳ ಪರಿಶೀಲನಾ ಸಮಯದಲ್ಲಿ ಸಲ್ಲಿಸಬೇಕು.
8. ನೇಮಕಾತಿ ಬಗ್ಗೆ ಅಂತಿಮ ತೀರ್ಮಾನವನ್ನು ನೇಮಕಾತಿ ಪ್ರಾಧಿಕಾರದ ಅಧ್ಯಕ್ಷರಾದ ಜಿಲ್ಲಾಧಿಕಾರಿ, ಕೋಲಾರ ಜಿಲ್ಲೆ, ಕೋಲಾರ ಇವರು ಕಾಯ್ದಿರಿಸಿಕೊಂಡಿರುತ್ತಾರೆ.
9. ಕರ್ನಾಟಕ ಜನರಲ್ ಸರ್ವಿಸ್ (Revenue subordinate branch) (Cadre & Recruitment) (ತಿದ್ದುಪಡಿ) ನಿಯಮಗಳು 2008 ಮತ್ತು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977 ರ ಪ್ರಕಾರ ಅಭ್ಯರ್ಥಿಯನ್ನು ಅವರು ಪಿ.ಯು.ಸಿ. ಅಥವಾ ಸಿಬಿಎಸ್‌ಸಿ ಅಥವಾ ಐಸಿಎಸ್‌ಇ ನಡೆಸುವ 12 ನೇ ತರಗತಿ ಪರೀಕ್ಷೆಯಲ್ಲಿ ಪಡೆದ ಅಂಕಗಳು (on merit) ಮತ್ತು ಮೀಸಲಾತಿ ಆಧಾರದ ಮೇಲೆ ಮಾತ್ರ ಆಯ್ಕೆ ಮಾಡಲಾಗುವುದು. ಅಂಕಗಳು ಸಮಾನವಾಗಿರುವ ಪ್ರಕರಣಗಳಲ್ಲಿ ಅಭ್ಯರ್ಥಿಯ ಜನ್ಮ ದಿನಾಂಕವನ್ನು ಪರಿಗಣಿಸಿ ಅರ್ಹನಾದ ಹಿರಿಯ ಅಭ್ಯರ್ಥಿಯನ್ನು ಪರಿಗಣಿಸಲಾಗುವುದು. ಮುಕ್ತ ವಿದ್ಯಾಲಯದಿಂದ ನೀಡಲಾದ ಪ್ರಮಾಣಪತ್ರಗಳನ್ನು ಹಾಗೂ ಗಳಿಸಿದ ಅಂಕಗಳನ್ನು ಪರಿಗಣಿಸಲಾಗುವುದಿಲ್ಲ.
10. ನೇಮಕಾತಿಯು ಸಂಪೂರ್ಣವಾಗಿ ಮೆರಿಟ್ ಮತ್ತು ಮೀಸಲಾತಿ ನಿಯಮಗಳನ್ವಯ ಮಾತ್ರವೇ ನಡೆಯುತ್ತದೆ.
11. 1:10 ಅನುಪಾತದಲ್ಲಿ ತಾತ್ಕಾಲಿಕ ಪಟ್ಟಿ ಪ್ರಕಟಿಸಲಾಗುವುದು ಹಾಗೂ ಅಭ್ಯರ್ಥಿಯ ಹೆಸರು ತಾತ್ಕಾಲಿಕ ಪಟ್ಟಿಯಲ್ಲಿ ನಮೂದಿಸಿದ ಮಾತ್ರಕ್ಕೆ ಅವರ ಆಯ್ಕೆ ಅಂತಿಮವಾಗಿದೆ ಎಂದು ಭಾವಿಸತಕ್ಕದ್ದಲ್ಲ. ಆಯ್ಕೆಯ ಸಂಬಂಧವಾಗಿ ಈ ಕಛೇರಿಯೊಂದಿಗೆ ಯಾವುದೇ ಪತ್ರ ವ್ಯವಹಾರ ನಡೆಸಲು ಅವಕಾಶ ಇರುವುದಿಲ್ಲ.
12. ಅಂತಿಮವಾಗಿ ಅಭ್ಯರ್ಥಿಗಳಿಗೆ ನೇಮಕಾತಿ ಆದೇಶಗಳನ್ನು ನೀಡುವ ಮುನ್ನ ಯಾವುದೇ ಹಂತದಲ್ಲಿ ಯಾವುದೇ ಕಾರಣ / ಮಾಹಿತಿ ನೀಡದೆ ಈ ನೇಮಕಾತಿ ಪ್ರಕ್ರಿಯೆಯನ್ನು ಮುಂದೂಡುವ ಅಥವಾ ರದ್ದುಪಡಿಸುವ ಅಥವಾ ವಿಧಿಸಲಾಗಿರುವ ಯಾವುದೇ ಷರತ್ತನ್ನು ಸಡಿಲಗೊಳಿಸುವ ಅಥವಾ ಹೆಚ್ಚುವರಿ ಷರತ್ತನ್ನು ವಿಧಿಸುವ, ತುಂಬಲಾಗುವ ಹುದ್ದೆಗಳ ಸಂಖ್ಯೆಯನ್ನು ಬದಲಾಯಿಸುವ / ನಿರ್ಣಯಿಸುವ ಅಧಿಕಾರವನ್ನು ಜಿಲ್ಲಾಧಿಕಾರಿಗಳು, ಕೋಲಾರ ಜಿಲ್ಲೆ ರವರು ಕಾಯ್ದಿರಿಸಿಕೊಂಡಿರುತ್ತಾರೆ.

**ಡಿ.ಕೆ. ರವಿ**
ಅಧ್ಯಕ್ಷರು,
ಗ್ರಾಮಲೆಕ್ಕಾಧಿಕಾರಿಗಳ ನೇಮಕಾತಿ ಮತ್ತು
ಆಯ್ಕೆ ಪ್ರಾಧಿಕಾರ ಹಾಗೂ ಜಿಲ್ಲಾಧಿಕಾರಿಗಳು, ಕೋಲಾರ ಜಿಲ್ಲೆ, ಕೋಲಾರ.

**P.R.135**
**SC - 50**

ಸರ್ಕಾರಿ ಕೇಂದ್ರ ಮುದ್ರಣಾಲಯ, ಘಟಕ-2, ಬೆಂಗಳೂರು-59